# ಎದಿರೇಟು

ಕಾದಂಬರಿ

ಲೇಖಕರು :

ನಾಡಿಗೇರ ಕೃಷ್ಣರಾಯರು

ಶಾರದಾ ಸಾಹಿತ್ಯ ಮಾಲೆಯ ೧೧ನೇ ಕಿರಣ

೧೯೫೦

# ಎದಿರೇಟು

ಹರಟೆಗಳಿಗೆ ಹೆಸರು ಪಡೆದ ಶ್ರೀ ನಾಡಿಗೇರರ ಚೊಚ್ಚಲು ಕಾದಂಬರಿಯಿದು. ತಾವು ನೋಡಿದ ಅನುಭವಿಸಿದ ವಿಷಯಗಳನ್ನು ಈ ಕಾದಂಬರಿಯಲ್ಲಿ ಸ್ವಾರಸ್ಯವಾಗಿ ವಿವರಿಸಿದ್ದಾರೆ. ಈ ಕಾದಂಬರಿಯ ರಸದೂಟದ ವೈಶಿಷ್ಟ್ಯವೆಂದರೆ, ಅವರು ಹೇರಳವಾಗಿ ಒದಗಿಸಿರುವ ಉಪ್ಪಿನಕಾಯಿ, ಹಪ್ಪಳ ಸಂಡಿಗೆಯಂತಹ ನಗೆ ವ್ಯಂಜನಗಳು.

ನಮ್ಮ ಕಥಾನಾಯಕ ಪ್ರಾಣೇಶ ಈ ಪ್ರಪಂಚದಲ್ಲಿ ಜನ್ಮ ತಾಳಬೇಕಾದರೆ, ವೆಂಕೋಬಾಚಾರಿ ಮತ್ತು ವೆಂಕೂಬಾಯಿಯವರು ನಡೆಸಿದ ತೀರ್ಥಯಾತ್ರೆಗಳು, ಹೊತ್ತ ಹರಕೆಗಳು ಅಷ್ಟಿಷ್ಟಲ್ಲ. ಆಧುನಿಕ ಪವಾಡಗಳಲ್ಲಿ ನಂಬಿಕೆ ಇಲ್ಲವೆಂದು ವಾದಿಸುವವರಿಗೆ ತಕ್ಕ ಉತ್ತರವೆಂದರೆ ಪ್ರಾಣೇಶ ಲೋವರ್ ಸೆಕೆಂಡರಿ ಪ್ಯಾಸ್ ಆದುದೇ ಆಗಿದೆ. ಈ ಮುತ್ತುಗದ ಹೂವಿಗೆ ಮಾಧವಾಚಾರಿ ಗಂಟು ಹಾಕಿದ ಹೆಣ್ಣು ಮಡಿ ಕೋಲಿನಂತಿದ್ದ ರಾಧೆ . . ...... ಈ ಕಾದಂಬರಿಯನ್ನು ಓದತೊಡಗಿದ ಮೇಲೆ ನೀವು ಪುಸ್ತಕವನ್ನು ಕೆಳಗಿಡಲು ಬಯಸುವುದೇ ಇಲ್ಲ.

**'ಎದಿರೇಟ'** ನ್ನು ಓದುವಾಗ, ಎಲ್ಲಿಯಾದರೂ ನಿಮಗೆ **ಎದಿರೇಟು** ಬಿದ್ದರೆ, ನಮ್ಮ ಸಹಾನುಭೂತಿಯು ನಿಮ್ಮೊಂದಿಗಿದೆ.

**ಬೆಲೆ: ೧ರೂ. ೮ಆ.**

## ಲೇಖಕರು



ಶ್ರೀ ನಾಡಿಗೇರರು ಒಂದು ವಿಚಿತ್ರ ಪ್ರಾಣಿ. ಗಂಭೀರ ವಿಷಯವೆಂಬುದೇ ಅವರ ದಟ್ಟ ತಲೆಗೆ ಅಂಟುವುದಿಲ್ಲ. ಪ್ರತಿಯೊಂದನ್ನೂ ತೀಕ್ಷ್ಣ ದೃಷ್ಟಿಯ ವಕ್ರನೋಟದಿಂದ ನೋಡುತ್ತಾರೆ. ಅವರ ದೃಷ್ಟಿಗೆ ಕಡಪಾಕಲ್ಲು ಎಂದೂ ಕಾಣುವುದಿಲ್ಲ; ಅದರ ಕೆಳಗಿರುವ ಚರಂಡಿಯೇ ಕಾಣುತ್ತದೆ. ಇದನ್ನು ಅವರ ಮಾತಿನಲ್ಲಿ, ಬರಹಗಳಲ್ಲಿ ನೋಡಬಹುದು.

ವೃತ್ತಿಯಲ್ಲಿ ಪತ್ರಿಕೋದ್ಯಮಿ. ಪತ್ರಿಕೋದ್ಯಮಿಗಿರಲೇಬೇಕಾದ ತಾಪತ್ರಯ, ಸಾಲಶೂಲ, ಸಂಕಷ್ಟಗಳು ಇವರಿಗೆ ಇವೆ. ಆದರೂ ಇವನ್ನೇ ನೆನಸಿಕೊಂಡು ನಗುವ ಸ್ವಭಾವ ನಾಡಿಗೇರರದು!

ಇವರನ್ನು ನೋಡಿದರೆ ಆಗತಾನೆ ಬಿಡುಗಡೆಯಾದ ಕೈದಿಯಂತೆ ಕಾಣುತ್ತಾರೆ.



# ನನ್ನೆರಡು ಮಾತುಗಳು .... .... ....

ಶಾರದಾ ಸಾಹಿತ್ಯ ಮಾಲೆಯಲ್ಲಿ ನನ್ನ ಕಾದಂಬರಿಯು ಈಗ್ಗೆ ಒಂದು ವರ್ಷದ ಹಿಂದೆಯೇ ಬರಬೇಕಾಗಿತ್ತು. ಆದರೆ ಇದಕ್ಕೆ ಅನೇಕ ಅಡ್ಡಿ ಆತಂಕಗಳು ಬಂದವು. ಅದರಲ್ಲಿ ಬಹು ಮುಖ್ಯವಾದ ಅಡ್ಡಿ ಎಂದರೆ ನನ್ನ ಆಲಸಿಕೆ. ಇದುವರೆಗೆ ನಾನು ಅನೇಕ ಹರಟೆ ಸಂಗ್ರಹಗಳನ್ನು ಬರೆದಿದ್ದೇನೆ. ಇದು ನನ್ನ ಮೊದಲ ಕಾದಂಬರಿ. ಕಾದಂಬರಿ ವಿಚಾರವಾಗಿ ಹೆಚ್ಚು ಬರೆಯಲು ನನಗೆ ಮನಸ್ಸಿಲ್ಲ. ಅದು ನಿಮ್ಮ ಕೈಲಿದೆ. ನೀವೇ ಏನು ಬೇಕಾದರೂ ಹೇಳಿ.

ಆದರೆ ಒಂದು ವಿಷಯ...; ವಾಸ್ತವಿಕ ಚಿತ್ರವೊಂದನ್ನು ಓದುಗರ ಮುಂದಿಡಲು ಪ್ರಯತ್ನಿಸಿದ್ದೇನೆ. ನಾನು ಆರಿಸಿಕೊಂಡಿರುವ ಪಾತ್ರಗಳು, ಕಲ್ಪನಾ ಪ್ರಪಂಚದಿಂದ ಸಿಡಿದು ಬಿದ್ದವರಲ್ಲ. ಕೈಗೆ ಸಿಲುಕದ ಆದರ್ಶಗಳನ್ನು ಸಾಧಿಸಲು ಅವರು ಹೊರಟಿಲ್ಲ. ಸಾಮಾನ್ಯ ಮನುಷ್ಯರವರು. ಅವರ ಆಸೆ ಆಕಾಂಕ್ಷೆಗಳು, ಅವರ ಮನೋವೃತ್ತಿ, ಏನಾದರೂ ಒಂದು ಘಟನೆ ನಡೆದರೆ ಅವರ ಪ್ರತಿಕ್ರಿಯೆ ಹೇಗಿರುತ್ತದೆ ಎಂಬುದನ್ನು ಚಿತ್ರಿಸುವುದೇ ನನ್ನ ಉದ್ದೇಶ.

ಚಿತ್ರಗಾರನಿಗೂ, ಫೋಟೋಗ್ರಾಫರನಿಗೂ ಬಹಳ ಅಂತರವಿದೆ. ನಾನು ಈ ಕಾದಂಬರಿ ಬರೆಯುವಾಗ ಒಬ್ಬ ಫೋಟೋಗ್ರಾಫರ್ ಆಗಿದ್ದೇನೆ. ಇದ್ದುದನ್ನು ಇದ್ದಹಾಗೆ, ಕಂಡಿದ್ದನ್ನು ಕಂಡಹಾಗೆ ಬರೆದಿದ್ದೇನೆ. ಚಿತ್ರಗಾರನ ಕುಂಚದ ಕುಸುರಿ ಕೆಲಸವನ್ನು ನೀವು ಇಲ್ಲಿ ನೋಡಲಾರಿರಿ, ಆದರೆ ಫೋಟೋಗ್ರಾಫರನ ನೈಜ ಚಿತ್ರವನ್ನು ನೀವು ನೋಡಬಹುದು.

ಶಾರದಾ ಸಾಹಿತ್ಯ ಮಾಲೆಯ ಗೆಳೆಯ ಬಸವರಾಜಯ್ಯನವರ ಸಾಹಸಕ್ಕೆ ನನ್ನ ಅಭಿನಂದನೆಗಳು. ಅಂತೂ ನನ್ನಿಂದ ಒಂದು ಕಾದಂಬರಿಯನ್ನು ಬರೆಯಿಸಿದರು. ಅವರ ಪ್ರೇರಣೆಗೆ ನಾನು ತಲೆತೂಗಿದ್ದೇನೆ

ಶ್ರೀ ಶ್ರೀನಿವಾಸ ಮುದ್ರಣಾಲಯದ ಮಾಲೀಕರಾದ ಶ್ರೀ ವೆಂಕಟೇಶಯ್ಯನವರು, ತಡವಾದರೂ ಚಿಂತೆಯಿಲ್ಲ, ಅಂದವಾಗಿ ಮುದ್ರಿಸಿದ್ದಾರೆ. ಅವರಿಗೆ ನನ್ನ ಅಭಿನಂದನಾಋಣವನ್ನು ಸಲ್ಲಿಸಲೇಬೇಕು.

ಬೆಂಗಳೂರು. **ನಾಡಿಗೇರ ಕೃಷ್ಣರಾಯ**

ತಾ|| ೫-೪-೧೯೫೦

# ಎದಿರೇಟು

## ೧

ಹೊನ್ನಾಳಿ ಒಂದು ಚಿಕ್ಕ ತಾಲ್ಲೂಕು. ಶಿವಮೊಗ್ಗಿಯಿಂದ ಇಲ್ಲಿಗೆ ಇಪ್ಪತ್ತುನಾಲ್ಕು ಮೈಲಿ. ಹರಿಹರದಿಂದಲೂ ಇಪ್ಪತ್ತುನಾಲ್ಕು ಮೈಲಿ. ರೈಲಿನ ಮಾರ್ಗವಿಲ್ಲದ್ದರಿಂದ 'ನಾಗರೀಕತೆ' ಯ ಸೋಂಕು ಇಲ್ಲಿಗೆ ತಾಕಿಲ್ಲ. ಈಚೆಗೆ ಒಂದು ಹೈಸ್ಕೂಲು ಆರಂಭವಾಗಿ ೪–೫ ವರ್ಷಗಳು ಕಳೆದಿವೆ, ಅಷ್ಟೆ. ಆದರೆ ಉಳಿದೆಲ್ಲ ವಿಚಾರಗಳಲ್ಲಿಯೂ ಇದೊಂದು ದೊಡ್ಡ ಹಳ್ಳಿ. ಸೀನಿದರೆ, ಕೆಮ್ಮಿದರೆ ಬೀಳುವ ಹಳೆಯ ಮನೆಗಳು. ಹಿಂದೆ ಇದೊಂದು ಐತಿಹಾಸಿಕ ಸ್ಥಳವಾಗಿತ್ತೆಂದು ತೋರಿಸಲೋಸುಗ ಉಳಿದುಕೊಂಡಿರುವ ಕೋಟೆಯ ಗೋಡೆಯ ಅವಶೇಷಗಳು.

ಊರಹೊರಗಿರುವ ಬಸ್‌ಸ್ಟಾಂಡ್ ಒಂದು ವಿಹಾರಸ್ಥಳ. ಇದೇ ಊರಿನವರ ಲಾಲ್‌ಬಾಗ್, ಕಬ್ಬನ್‌ಪಾರ್ಕ್, ಜೂ. ಬೊಂಬಾಯಿಯಿಂದ ಉಡುಪಿ ಮಂಗಳೂರು ಮುಂತಾದ ಊರುಗಳಿಗೆ ಹೋಗುವವರು ಅನಿವಾರ್ಯವಾಗಿ ಈ ಊರಿನ ಮೇಲೆ ಹಾಯ್ದು ಹೋಗಬೇಕಾಗುತ್ತದೆ. ಆ ಜನರ ಉಡಿಗೆ ತೊಡಿಗೆ, ನಡೆ ನುಡಿ, ಭಾಷೆ ಮುಂತಾದುವುಗಳ ವಿಪುಲ ಚರ್ಚೆಗೆ ಈ ಊರಿನ ನಿರುದ್ಯೋಗಿ ಜನರಿಗೆ ವಿಶೇಷ ಆಹಾರ ದೊರೆಯುತ್ತದೆ. ಬಸ್‌ಸ್ಟಾಂಡ್ ಬಳಿ ಇರುವ ಬೇವಿನ ಕಟ್ಟೆಯೇ ಎಲ್ಲರಿಗೂ ಸುಖಾಸನಗಳನ್ನು ಒದಗಿಸುತ್ತದೆ.

ವಿದ್ಯೆ ಕಲಿತ ಜನ ಕಡಿಮೆ. ಕಲಿಯಬೇಕೆಂಬ ಆಕಾಂಕ್ಷೆಯಾಗಲೀ, ಕಲಿಯಲಿಲ್ಲವೆಂಬ ದುಃಖವಾಗಲೀ ಕಂಡುಬರುವುದಿಲ್ಲ. "ಅಪ್ಪ ಹಾಕಿದ ಆಲದ ಮರ"ಕ್ಕೆ ನೇಣುಹಾಕಿಕೊಳ್ಳುವ ಮನೋವೃತ್ತಿಯೇ ಈ ಜನರಲ್ಲಿ ಹೆಚ್ಚಾಗಿ ಬೇರೂರಿದೆ. ಇದ್ದ ಅಲ್ಪ ಸ್ವಲ್ಪ ಆಸ್ತಿಪಾಸ್ತಿಗಳನ್ನು ರೂಢಿಸಿ

ಕೊಳ್ಳುವವರು ಕೆಲವರಾದರೆ, ಅದನ್ನು ಕಾಸಿ ಕರಗಿಸಿ ಮೂಲೆಗುಂಪಾದವರು ಹೆಚ್ಚುಮಂದಿ. ಈ ಊರಿನವರಿಗೆ ಇಲ್ಲಿರುವ ಹೋಟಲುಗಳೇ ಮೃತ್ಯು. ಅವರ ಅಲ್ಪ ಸ್ವಲ್ಪ ಸಂಪಾದನೆಯೆಲ್ಲ ಈ ಹೋಟಲುಗಳ ಪಾಲು. ಈ ಸಂಪಾದನೆ ಇಲ್ಲದಾಗ ಬೆಳೆದ ಕಾಳುಕಡಿಗಳ ಚೀಲಗಳು ಹೋಟಲುಗಳ ಉಗ್ರಾಣಗಳಲ್ಲಿ ಸುಖನಿದ್ರೆ ಪಡೆಯಬೇಕು. ಕಾಳುಕಡಿ ತೀರಿದಮೇಲೆ ಮನೆಯಲ್ಲಿ ಹೆಂಗಸರು ಮತ್ತು ಹಿರಿಯರಿಗೆ ಕಾಣದಂತೆ ಪಾತ್ರೆ ಪಡಗಗಳನ್ನು ಕೊಟ್ಟು ದೋಸೆ, ಖಾರ ತಿಂದದ್ದೂ ಉಂಟು. ಇವು ತೀರಿದ ಮೇಲೆ ಮನೆಯಲ್ಲಿದ್ದ ಬೆಳ್ಳಿಯ ದೇವರುಗಳು, ಸಾಲಿಗ್ರಾಮುಗಳನ್ನೂ ಕೊಟ್ಟು ದೋಸೆ ತಿಂದ ಪುಣ್ಯಾತ್ಮರೂ ಇದ್ದಾರೆ.

ಈ ಬೇವಿನ ಕಟ್ಟೆಯೇ ಜನಾರ್ದನ ಕಛೇರಿಯೂ ಹೌದು. ಊರೊಳಗಿನ ಹೊಲಸು ತೊಳೆಯುವುದು ಇಲ್ಲಿಯೇ. ಇಲ್ಲಿ ಸುರಿಯುವ ಮಾತುಕತೆಗಳನ್ನು ಸಂಗ್ರಹಿಸಿದಲ್ಲಿ ದಿನವೂ ಒಂದು ಗೆಜೆಟ್ ಹೊರಡಿಸುವಷ್ಟು ವಿಷಯ ಸಿಕ್ಕುತ್ತದೆ. ನಡೆದ ಸಣ್ಣ ಪುಟ್ಟ ಘಟನೆಗಳು ಬಾಲಹಚ್ಚಿಕೊಂಡು ಬೃಹದಾಕಾರ ತಾಳುತ್ತವೆ. ನಿಜ ಸಂಗತಿಗಳು ವಿಕಾರವಾಗಿ ವಿರಾಡ್ರೂಪ ತಾಳುತ್ತವೆ. ಯಾರಾದರೂ ಪತ್ರಿಕೆಯಲ್ಲಿ ಓದಿದ ಹರಕು ಮುರುಕು ಸಂಗತಿಗಳನ್ನು ಥೂ ಬಿಡುತ್ತಾರೆ. ಒಂದಲ್ಲ ಎರಡಲ್ಲ ನೂರಲ್ಲ ಸಹಸ್ರಾರು ಸುದ್ದಿಗಳು ದಿನವೂ ಸುರಿಯಬೇಕು. ತಲೆಯ ಮೇಲೆ ಕೂತಿರುವ ಹೊತ್ತನ್ನು ಕಳಚುವದಾದರು ಹೇಗೆ? ಹಳ್ಳಿಗಳಲ್ಲಿ ಏನನ್ನಾದರೂ ಕಳೆದುಕೊಳ್ಳಬಹುದು. ಹಣ ಕಳೆದುಕೊಳ್ಳಬಹುದು, ಮಾನ ಮರ್ಯಾದೆಗಳನ್ನು ಕಳೆದುಕೊಳ್ಳಬಹುದು. ಆದರೆ ಹೊತ್ತನ್ನು ಕಳೆದುಕೊಳ್ಳುವಂಥ ದುಸ್ಸಾಧ್ಯ ಕೆಲಸ ಬೇರೊಂದಿಲ್ಲ. ಈ ಜನಾರ್ದನ ಕಛೇರಿಯು ಹೊತ್ತು ಕಳೆದುಕೊಳ್ಳುವುದರಲ್ಲಿ ಜನರಿಗೆ ಬಹುವಾಗಿ ನೆರವಾಗುತ್ತಿತ್ತು.

ಹೊನ್ನಾಳಿಯು ಮಲೆನಾಡು-ಬೈಲು ಸೀಮೆ ಸಂಧಿಸುವ ಸ್ಥಳ. ಸಾಮಾನ್ಯವಾಗಿ ಇಲ್ಲಿ ಬೆಳೆ ಚೆನ್ನಾಗಿ ಆಗುತ್ತದೆ. ಹಾಲು, ಮೊಸರು, ಸೌದೆ, ತರಕಾರಿ ಯಾವುದಕ್ಕೂ ತಾಪತ್ರಯವಿಲ್ಲ. ಜನರಾಡುವ ಮಾತೂ ಅಷ್ಟೆ. ಚಿತ್ರದುರ್ಗ ಜಿಲ್ಲೆಯ ಒರಟು ಶಿವಮೊಗ್ಗ ಜಿಲ್ಲೆಯ ನಯವೂ ಬೆರೆತು ಅದೆ.

ವಿಚಿತ್ರ ಭಾಷೆಯಾಗಿದೆ. ಇಲ್ಲಿಗೆ ಹದಿನೈದು ಮೈಲಿಗಳ ದೂರದಲ್ಲಿ ಧಾರ್ವಾಡ ಜಿಲ್ಲೆ ಹತ್ತುವದರಿಂದ ಅದರ ಪ್ರಭಾವವೂ ಈ ಊರಿನ ಮೇಲೆ ಆಗಿದೆ.

ಊರಿನ ಜನರು ಹಾಸ್ಯ ಪ್ರಿಯರು. ಆದರೆ ಅವರ ಹಾಸ್ಯ ವನ್ನು ತಡೆಯುವುದು ಕೊಂಚ ಕಷ್ಟವೇ ಸರಿ. ಮರಹಾಸ್ಯ, ಒರಟು ಹಾಸ್ಯ ಅನ್ನುತ್ತಾರಲ್ಲ, ಆ ಮಾದರಿಯದು. ಇನ್ನೊಬ್ಬರು ಅವರ ಬಗ್ಗೆ ಹಾಸ್ಯಮಾಡಿದರೆ ಅವನ್ನು ಜೀರ್ಣಿಸಿಕೊಳ್ಳುವ ಶಕ್ತಿ ಇದೆ. ಹಾಸ್ಯ ಮಾಡಿದ ಎದುರಾಳಿ ತಡವರಿಸಿಕೊಳ್ಳುವಂತೆ ಅವನಿಗೆ ಪ್ರತ್ಯುತ್ತರ ಕೊಡುವ ಸಮಯ ಸ್ಫೂರ್ತಿಯೂ ಇದೆ.

ಕೂಡಲಿಯಲ್ಲಿ ಕೂಡಿದ ತುಂಗ ಭದ್ರಾ ನದಿಗಳು ಒಂದಾಗಿ—ತುಂಗ ಭದ್ರ—ಈ ಊರಿನ ಮೂಲಕ ಹರಿದು ಹರಿಹರದ ಕಡೆ ಸಾಗುತ್ತದೆ. ನದಿ ಬಹು ರಮ್ಯವಾಗಿದೆ. ಸಾಮಾನ್ಯವಾಗಿ ಭದ್ರಾನದಿ ಹರಿಯುವುದು ಬಂಡೆ ಪ್ರದೇಶಗಳಲ್ಲಿ ಊರಿನ ಸಮೀಪವೇ ನೀರು ನಿಲ್ಲಲು ದೊಡ್ಡ ಮಡುವು ಇರು ವುದರಿಂದ ಎಲ್ಲ ಋತುಗಳಲ್ಲಿಯೂ ನದಿಯ ಮಟ್ಟ ಒಂದೇ ಸಮನಾ ಗಿರುತ್ತದೆ. ಜಾತಿ ಜಾತಿಗಳನ್ನು ವಿಂಗಡಿಸಿದಂತೆ ನದಿಯನ್ನೂ ಹರಿದು ಹಂಚುವ ಪ್ರಯತ್ನವನ್ನು ಹಿಂದಿನವರು ಮಾಡಿದಂತೆ ಕಾಣುತ್ತವೆ. ಬ್ರಾಹ್ಮ ಣರು, ಕುರುಬರು, ಮುಸ್ಲಿಮರು ಮತ್ತು ಅಗಸರು ಪ್ರತ್ಯೇಕವಾಗಿ ಆಯಾ ಜಾತಿಯವರು ನೀರು ತುಂಬುವ, ಸ್ನಾನಮಾಡುವ ಮತ್ತು ಒಗೆಯುವ ಸ್ಥಳಗಳಿಗೆ ಹೆಸರುಗಳನ್ನು ಕೊಟ್ಟಿದ್ದಾರೆ. ನದಿಯ ದಡದಲ್ಲಿ ವಿಸ್ತಾರವಾದ ಅರಳಿ ಬೇವಿನ ಮರಗಳಿವೆ. ವಿಶಾಲವಾದ ಮೆಟ್ಟಲುಗಳೇ ಒಗೆಯುವ ಕಲ್ಲುಗಳಾಗಿ ಪರಿಣಮಿಸುತ್ತವೆ. ವಿರಾಮವೇತನ ಪಡೆದು, ಕೂತುಂಬುವವ ನಿಗೆ ಇದೊಂದು ಆದರ್ಶ ಊರೆಂದು ಧಾರಾಳವಾಗಿ ಹೇಳಬಹುದು.

ಮೇಲೆ ವಿವರಿಸಿದ ವರ್ಣನೆಯಿಂದ ಹೊನ್ನಾಳಿ ಊರಿನ ಪರಿಚಯ ಸಂಪೂರ್ಣವಾಗಿ ಮುಗಿಯಿತೆಂದು ಹೇಳಲು ಬರುವುದಿಲ್ಲ. ಈ ಊರಿನಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಮಠವೊಂದಿದೆ. ಮಂತ್ರಾಲಯದಿಂದ ತಂದ ಮೂಲವೃತ್ತಿಕೆಯಿಂದ ಕಟ್ಟಿಸಿದ ವೃಂದಾವನ ಈ ಮಠದಲ್ಲಿದೆ. ಮಂತ್ರಾಲ ಯದಲ್ಲಿ ಯಾವ ರೀತಿ ವರಗಳು ಸಿದ್ಧಿಯಾಗುವವೋ, ಹಾಗೆಯೇ ಇಲ್ಲೂ

ಆಗುವವೆಂಬ ಪ್ರತೀತಿಯಿದೆ. ಮಠ, ಮಠಕ್ಕೆ ಸಂಬಂಧಿಸಿದ ರಾಜಕೀಯ ಒಂದು ರಮ್ಯ ಕಾದಂಬರಿಯೇ ಆದೀತು. ಶ್ರಾವಣ ಶುದ್ಧ ಪೌರ್ಣಿಮೆಯ ದಿನದಿಂದ ಐದು ದಿನಗಳ ಪರ್ಯಂತ ಇಲ್ಲಿ ಉತ್ಸವ, ಸಂತರ್ಪಣೆ, ಇತ್ಯಾದಿ ಕೈಂಕರ್ಯಗಳು ನಡೆಯುತ್ತವೆ. ಈ ಐದು ದಿನಗಳಲ್ಲಿ ಬ್ರಾಹ್ಮಣರ ಮನೆಗಳಲ್ಲಿ ಒಲೆಯನ್ನೇ ಹೊತ್ತಿಸುವುದಿಲ್ಲವೆಂದು ಹೇಳಬಹುದು. ಹೆಂಡಂದಿರು ಆಕಸ್ಮಾತ್ತಾಗಿ ಒಲೆ ಹೊತ್ತಿಸಿಯಾರೆಂದು ಗಂಡಂದಿರು ಒಲೆಗಳನ್ನು ಅಗೆದು ಹಾಕುತ್ತಾರೆಂದು ಆ ಊರಿನವರೇ ಹೇಳುತ್ತಾರೆ! ಮಧ್ಯಾಹ್ನ ಮಾಡಿದ ಒಂದು ಊಟ ಮೂರು ದಿನಗಳಿಗೆ ನಾಕಾಗುವಷ್ಟಿರುತ್ತದಂತೆ. ಅಂದಮೇಲೆ ಸಂಜೆ ಒಲೆ ಹೊತ್ತಿಸುವ ಆವಶ್ಯಕತೆಯೇ ಇರುವದಿಲ್ಲ. ಶ್ರೀ ರಾಯರಲ್ಲಿ ಜನರಿಗೆ ಆ ಐದು ದಿನಗಳಲ್ಲಿ ಎಂದಿಲ್ಲದ ಭಕ್ತಿ ಕೋಡಿಕೋಡಿಯಾಗಿ ಹರಿಯುತ್ತದೆ. ವರ್ಷವಿಡೀ ಅತ್ತ ಮುಖ ತಿರುಗಿಸದಿದ್ದವರು ಆಗ ಮಠದಲ್ಲಿಯೇ ಬಿದ್ದು ಸಾಯುತ್ತಿರುತ್ತಾರೆ. ನಾನು. ತಾನೆಂದು ಎಲ್ಲ ಕಾರ್ಯಕ್ರಮಗಳಲ್ಲಿಯೂ ಪ್ರಮುಖ ಪಾತ್ರ ವಹಿಸಲು ಮುಂದೆ ಬರುತ್ತಿರುತ್ತಾರೆ. ಆದರೆ ಐದು ದಿನಗಳ ಊಟದ ಕಾರ್ಯಕ್ರಮವನ್ನು ಬದಿಗೊತ್ತಿದಲ್ಲಿ ಈ ಜನರು ಅತ್ತ ಸುಳಿದಾರೆಂಬ ಅನುಮಾನ ನನಗಿದ್ದೇ ಇದೆ. ಲಂಚ ಕೊಡುವ ದೇವರಿದ್ದರೆ ಭಕ್ತರಿಗೇನು ಕಮ್ಮಿ? ಆ ದೇವರನ್ನು ತನ್ನ ಅಂತಸ್ತಿಗೆ ಇಳಿಸಿಕೊಂಡಿರುವ ಮನುಷ್ಯನೇ ದೇವರಿಗಿಂತ ಒಂದು ಕೈಮೇಲು.

ಈ ಮಠದಲ್ಲಿ ಒಂದು ಸಾರಿ ಒಂದು ಸ್ವಾರಸ್ಯ ಪ್ರಸಂಗ ನಡೆಯಿತು. ದೇವರ ತೀರ್ಥವನ್ನು ಹಂಚುವುದರಲ್ಲಿ ಇಬ್ಬರು ಪೂಜಾರಿಗಳಿಗೆ ವಿವಾದ ಉಂಟಾಯಿತು. ಬಾಯಿಂದ ಆದ ಜಗಳ ಕೈಗೆ ಹಬ್ಬಿತು. ಅವಾಚ್ಯ ಶಬ್ದಗಳ ಉಚ್ಚಾರಣೆ ಯಥೇಷ್ಟವಾಗಿ ಸಾಗಿತು. ಕೆಲ ಜನರಲ್ಲಿ ಒಂದು ವ್ಯಾಧಿ ಇದೆ. ಬೈಗಳಗಳನ್ನು ಮಾತೃಭಾಷೆಯಲ್ಲಿ ಆಡದೆ ಇತರ ಭಾಷೆಗಳ ನೆರವು ತೆಗೆದುಕೊಳ್ಳುತ್ತಾರೆ. ವಿಧವಾಪತಿ, ಮಾತೃಗಾಮಿ, ಮಾದರ್ ಚೋದ್, ಬೇಕೂಫ್, ರ್‍ಯಾಸ್ಕಲ್, ಫೂಲ್ ಮುಂತಾದ ಪದಗಳಿಗೆ ಕನ್ನಡದಲ್ಲಿ ತಕ್ಕ ಪದಗಳಿಲ್ಲವೆ? ಅಥವಾ ಕನ್ನಡ ಭಾಷೆಯ ಮರ್ಯಾದೆಯನ್ನು ಉಳಿಸಿ ಬೇರೆ ಭಾಷೆಗಳ ಮರ್ಯಾದೆ ತೆಗೆಯಲು ಇದೊಂದು ಒಳಸಂಚೆ?

ಇದರಂತೆ ಗುಪ್ತಾಂಗಗಳ ಬಗ್ಗೆ ಮಾತನಾಡುವಾಗ ಸಹ ಪರಭಾಷೆಯ ನೆರವು ಪಡೆಯುತ್ತಿರುವುದಕ್ಕೆ ನಮ್ಮವರ ಸ್ವೈಚ್ಛಮನೋವೃತ್ತಿಯೇ ಕಾರಣವೆಂದು ಹೇಳಬೇಕೆ? ಇರಲಿ. ನಾನು ತೀರ್ಥಕೊಡಬೇಕೆಂದು ಒಬ್ಬ ಪೂಜಾರಿಯೂ ತಾನು ತೀರ್ಥ ಕೊಡಬೇಕೆಂದು ಇನ್ನೊಬ್ಬ ಪೂಜಾರಿಯೂ ಮುಂದೆ ಧಾವಿಸಿದರು. ಬೈಗಳದ ಸುರಿಮಳೆ ಧಾರಾಕಾರವಾಗಿ ಸಾಗಿತ್ತು. ಅದರಲ್ಲಿ ಒಬ್ಬನಿಗೆ ಕೋಪ ಹೆಚ್ಚಿತು, ಇನ್ನೊಬ್ಬನ ಕೆನ್ನೆಗೆ ಹೊಡೆದ. ಇನ್ನೊಬ್ಬನ ಕೈ ಬಾಳೇ ಹಣ್ಣನ್ನೇನೂ ಸುಲಿಯುತ್ತಿರಲಿಲ್ಲ. ಅವನೂ ಹೊಡೆದ. ಸರಿ ಕೈಯಲ್ಲಿದ್ದ ತೀರ್ಥದ ತಟ್ಟೆಯಲ್ಲಿದ್ದ ದೇವರು, ಸಾಮುಗ್ರಿಗಳಿಂದ ಇಬ್ಬರೂ ಹೊಡೆದಾಡಿದರು. ಊಟಕ್ಕೆ ಕೂತ ಜನರ ಎಲೆಯ ಮೇಲೆಲ್ಲ ನೂರೆಂಟು ದೇವರುಗಳು. ಜಗಳಾಡುವವರು ಇಬ್ಬರಾದರೆ ನೋಡುವರು ನೂರೆಂಟು ಜನ. ಬರೀ ಬಾಯಿ ಜಗಳವಾಡುತ್ತಿದ್ದರೆ ಜನಕ್ಕೆ ಅಷ್ಟು ತೃಪ್ತಿಯಾಗದು. ಹೊಡೆದಾಟವಾಗಬೇಕು. ಯಾರದಾದರೂ ಹಲ್ಲುಮುರಿಯಬೇಕು. ಮೋಟಾರುಗಳ ಢಿಕ್ಕಾಢಿಕ್ಕಿಯಾದಾಗ ಸಂತೆಯೇ ನೆರೆದಿರುತ್ತದೆ. ಆದರೆ ಯಾರೂ ಸತ್ತಿಲ್ಲವೆಂದಾಗ, ಯಾರಿಗೂ ಗಾಯಗಳಾಗಿಲ್ಲವೆಂದಾಗ, ಮೋಟಾರುಗಳಿಗೆ ಹೆಚ್ಚು ನಷ್ಟ ಸಂಭವಿಸಿಲ್ಲವೆಂದಾಗ ನೇರಿದ ಜನಕ್ಕೆ ಅತೃಪ್ತಿಯುಂಟಾಗುತ್ತದೆ. “ ಅಯ್ಯೋ, ಇಷ್ಟೇನೆ ! ಎಂಬ ಉದ್ಗಾರ ಅವರ ಬಾಯಿಂದ ಹೊರಬೀಳುತ್ತದೆ. ಆದ ಘಟನೆಯನ್ನು ಇತರರಿಗೆ ವರ್ಣಿಸಿ ಹೇಳಲು ಸಾಕಷ್ಟು ವಸ್ತು ಬೇಕಲ್ಲವೆ? ಹೊಡೆದಾಟ ನಡೆಯುತ್ತಿರುವಾಗ ಸ್ವಾರಸ್ಯ ಘಟ್ಟವೊಂದು ಮುಟ್ಟುವವರೆಗೂ ಯಾರೂ ಬಿಡಿಸಲು ಬರುವದಿಲ್ಲ. ಈ ಸಂದರ್ಭದಲ್ಲಿ ಜಗಳ ತಾರಕಾಹಂತಕ್ಕೇರಿದಾಗ ಜನರು ಬಂದುಬಿಡಿಸಿದರು. ತೀರ್ಥವನ್ನು ಯಾರು ಕೊಡಬೇಕೆಂಬ ಸಮಸ್ಯೆ ಬಗೆಹರಿಯದ್ದರಿಂದ ತೀರ್ಥವಿಲ್ಲದೆ ಭಕ್ತಾದಿಗಳು ಊಟಕ್ಕೆ ಕುಳಿತುಕೊಳ್ಳಬೇಕಾಯಿತು. ಅಷ್ಟೇ ಅಲ್ಲ, ದೇವರುಗಳ ತೂರಾಟ ಬೀರಾಟ ನಡೆದಾಗ ಒಂದು ವಿಷ್ಣು ಸಾಲಿಗ್ರಾಮವು ಹುಳಿಯ ಕೊಳಗದಲ್ಲಿ ಬಿದ್ದಿತ್ತು. ಬರೀ ಸಪ್ಪೆ ಹಾಲು ಕುಡಿದು ಬೇಸತ್ತಿದ್ದ ಕ್ಷೀರಸಾಗರಶಯನನಾದ ಪರಮಾತ್ಮನಿಗೆ ಮಸಾಲೆ ಹಾಕಿದ ಹುಳಿಯ ಕೊಳಗದಲ್ಲಿ ಪವಡಿಸುವ ಸದವಕಾಶ ಕಲ್ಪಿಸಿದ ಪೂಜಾರಿಗಳು ನಿಜವಾಗಿಯೂ ಭಗವದ್ಭಕ್ತರೆಂದು ಹೇಳಬಹುದು.

ವೈದಿಕಕ್ಕೆ ಸಂಬಂಧಿಸಿದ ವಿಷಯಗಳಲ್ಲಿ ಮಹತ್ತರವಾದ ರಾಜಕೀಯ ಅಡಗಿದೆ. ಯಾವ ಕರ್ಮಗಳಿಂದ ನಮ್ಮ ಪ್ರಾಚೀನ ಬಂಧನಗಳನ್ನು ಹರಿದು ಬಿಸುಟು ಜ್ಞಾನಮಾರ್ಗಕ್ಕೆ ಪ್ರವೃತ್ತರಾಗಬೇಕೆಂದು ಆಶಿಸುತ್ತೇವೆಯೋ, ಅದಕ್ಕೆ ಬದಲು "ನಮಾಜು ಮಾಡಲು ಹೋದವನು ಮಸೀದಿಯನ್ನು ಕೊರಳಿಗೆ ಹಾಕಿಕೊಂಡಂತೆ" ನಮ್ಮ ಬಂಧನಗಳನ್ನು ನೂರ್ಮಡಿಯಾಗಿ ವೃದ್ಧಿಸಿಕೊಳ್ಳುತ್ತೇವೆ. ಹಿಂದಿನವರು ಹಾಕಿಕೊಟ್ಟ ಕರ್ಮಕಾಂಡಗಳು ಇಂದಿನವರ ಅನುಕೂಲಕ್ಕೆ ತಕ್ಕಂತೆ ಇಂಡಿಯಾ ರಬ್ಬರ್ ಹಿಗ್ಗಿದಂತೆ ಹಿಗ್ಗಬೇಕಾಗಿದೆ. ಧಾರ್ಮಿಕ ಹಾಗೂ ಮತೀಯ ಸಮಾರಂಭಗಳು ಸಾಮಾಜಿಕ ಸಮಾರಂಭಗಳಾಗಿವೆ ನಾವು ಅನುಸರಿಸುವ ಪ್ರತಿಯೊಂದು ಕರ್ಮವು ಕಾಲಕಾಲಕ್ಕೆ ಬದಲಾವಣೆ ಹೊಂದಿ ವಿಕೃತ ಕರಾಳ ಸ್ವರೂಪವನ್ನು ಹೊಂದಿದೆ. ನಾವು ಅವನ್ನು ಏತಕ್ಕೆ ಅನುಸರಿಸುತ್ತೇವೆಂದಾಗಲೀ, ಅವುಗಳ ಅಂತರಾರ್ಥ ಏನೆಂಬುದಾಗಲೀ ನಮಗೆ ತಿಳಿದಿಲ್ಲ. ಹಿರಿಯರು ಹಾಗೆ ಮಾಡುತ್ತಿದ್ದರು, ನಾವು ಹಾಗೆ ಮಾಡಬೇಕು. ಅವುಗಳ ವಿಚಾರ ಯಾರಿಂದಲೂ ತಿಳಿಯುವಂತಿಲ್ಲ. ಆ ಬಗ್ಗೆ ಕೇಳಿದರೆ ನಾವು ನಾಸ್ತಿಕರೆಂಬ ಚೀಟಿಯನ್ನು ಅಂಟಿಸಿಬಿಡುತ್ತಾರೆ. ಪ್ರತಿಯೊಂದು ತೀರ್ಥಕ್ಷೇತ್ರದ ಬಗ್ಗೆ ಹುಟ್ಟಿಕೊಂಡಿರುವ ಸ್ಥಳಪುರಾಣ, ಇತಿಹಾಸ, ದಂತಕಥೆ ಒಂದೊಂದು ಮೂಟೆಯಷ್ಟಾಗುತ್ತದೆ. ಇತಿಹಾಸ ಕೊನೆಗೊಂಡಿದ್ದಲ್ಲಿ, ದಂತಕತೆ ಆರಂಭವಾದ್ದಲ್ಲಿ ಎಂದು ಹೇಳುವ ದಾಷ್ಟೀಕ ಯಾರಿಗೂ ಇಲ್ಲ. ಆದರೆ ಇದರಲ್ಲಿನ ಒಂದು ಸ್ವಾರಸ್ಯ ಏನೆಂದರೆ ಈ ದಂತಕತೆಗಳು ಸಾಮಾನ್ಯವಾಗಿ ಒಂದೇ ತೆರನಾಗಿರುತ್ತವೆ. ಒಂದಕ್ಕೊಂದು ಹೆಚ್ಚಿನ ಸಾಮ್ಯದಸ್ಯ ಇರುತ್ತವೆ. ಪ್ರತಿ ತೀರ್ಥ, ಪುಣ್ಯಕ್ಷೇತ್ರಗಳ ಬಗ್ಗೆ ಹೇಳುವ ಐತಿಹ್ಯ ಯಾವುದೋ ಇನ್ನೊಂದು ತೀರ್ಥಕ್ಷೇತ್ರ ಇದ್ದಂತೆ ಇರುತ್ತದೆ. ಆ ತೀರ್ಥಗಳಲ್ಲಿ ಸ್ನಾನಮಾಡಿದರೆ, ಆ ಕ್ಷೇತ್ರಕ್ಕೆ ಹೋದರೆ ಎಷ್ಟೋ ಕೋಟಿ ಯಜ್ಞಮಾಡಿದ ಫಲ ನಮಗೆ ಪ್ರಾಪ್ತಿಯಾಯಿತೆಂದೂ, ನಾವು ಹಿಂದೆ ಮಾಡಿರುವ ಪಾಪಗಳೆಲ್ಲ ತೊಳೆದುಹೋದವೆಂದೂ ರಸೀದಿ ಕೊಟ್ಟುಬಿಡುತ್ತಾರೆ. ಈ ಸಮಯದಲ್ಲಿ ಸರ್ವಜ್ಞಕವಿ ಹೇಳುವ ಮಾತು ಜ್ಞಾಪಕಕ್ಕೆ ಬರುತ್ತದೆ. "ಮಿಾಯಲು ಪಾಪ ಪೋಪುದೇ ? ಅದೇನು ಕೆಸರೇ ?" ಸ್ನಾನಮಾಡಿ ಮೈಗೆ ಹತ್ತಿದ ಕೆಸರನ್ನು ತೊಳೆದುಕೊಳ್ಳಲುಬಹುದು, ಆದರೆ

ಮಾಡಿದ ಪಾಪಕ್ಕೆ ತಕ್ಕ ಫಲಭೋಗವನ್ನು ಅನುಭವಿಸಿಯೇ ತೀರ ಬೇಕಲ್ಲವೆ ?

ಇಂತಹ ಆರಾಧನೇ ಸಮಯದಲ್ಲಿ ಜನರ ನೈಜಗುಣ ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಯಾರು ಯಾರು ಎಷ್ಟು ಹಂಕರು ಎಂಬುದನ್ನು ಒರೆಗಲ್ಲಿಗೆ ಹಚ್ಚಬಹುದು. ಎಲೆ ಹಾಕುವುದಕ್ಕೆ ಮುಂಚೆ ಒಂದು ಗಂಟೆಯೇ ಜನರ ಹಿಂಡು ಬಂದು ನೆರೆಯುವುದು. ಎಲೆ ಹಾಕುವ ಸ್ಥಳಗಳನ್ನು ಮೊದಲೇ ರಿಜರ್ವ್ ಮಾಡಿಕೊಳ್ಳುತ್ತಾರೆ. ತಾವು ತಮ್ಮ ಮನೆಯವರು ತಮಗೆ ಬೇಕಾದವರಿಗೆ ಎಲೆಗೆ ಜಾಗಗಳನ್ನು ಹಿಡಿಯಲು ದೊಡ್ಡ ದೊಡ್ಡ ಅಂಗವಸ್ತ್ರಗಳನ್ನು ಹಾಸಿರುತ್ತಾರೆ. ಹಾಸಿದ ಅಂಗವಸ್ತ್ರಗಳನ್ನು ಕಾಯಲು ಮನೆಯ ಹುಡುಗರನ್ನು ಕುಳ್ಳಿರಿಸಿರುತ್ತಾರೆ . ಎಲೆಗಾಗಿ ಹಾಹಾಕಾರ ಆರಂಭವಾಗುತ್ತದೆ. " ಈ ಎಲೆ ಹರಕ, ಬೇರೆ ಕೊಡಿ, ನಮ್ಮ ಅಣ್ಣನಿಗೊಂದು ಬೇರೆ ಎಲೆ ಕೊಡಿ " ಪಂಚೆ ಮಾಸುವದೆಂದು ಆಸನದ ಕೆಳಗೆ ಎಲೆಗಳನ್ನು ಹಾಕಿಕೊಳ್ಳುವ ಭೂಪರನ್ನೂ ನೋಡಿದ್ದೇನೆ. ಅಡಿಗೆ ಬಡಿಸುವಾಗ ಕೂಗಾಟ ಇನ್ನೂ ಹೆಚ್ಚಾಗುತ್ತದೆ " ಪಲ್ಯ ಬಹಳ ಸ್ವಲ್ಪ ಹಾಕಿದ್ದೀರಿ, ಇನ್ನು ಸ್ವಲ್ಪ ಹಾಕಿ " " ಈ ಪಾರ್ಶ್ವ ಏನೂ ಬಂದಿಲ್ಲ " ಅಂತ ಕಿರಚುತ್ತಿರುತ್ತಾರೆ. ನಾಲ್ಕು ಉಪವಾಸ ಮಾಡಿದವರಲ್ಲಿ ಸಹ ಇಂಥ ತಹತಹ ಕಾಣುವುದು ಕಷ್ಟವಾದೀತು. ದೇವರ ಸಾನ್ನಿಧ್ಯದಲ್ಲಿರುವ, ದೇವರ ಪ್ರಸಾದಕ್ಕೆಂದು ತಾವು ಬಂದಿರುವ ಅಂಶ ಅವರ ದೃಕ್ಪಥದಿಂದ ಸಂಪೂರ್ಣವಾಗಿ ಅಳಿಸಿ ಹೋಗಿರುತ್ತದೆ.

ಈ ಆರಾಧನೆಯ ಸಮಯದಲ್ಲಿ ಧರ್ಮದ ಅನೇಕ ಮದುವೆ, ಮುಂಜಿಗಳು ಆಗುತ್ತವೆ. ಅಲ್ಲದೆ ಸುಲಭ ಖರ್ಚಿನಲ್ಲಿ ಇವನ್ನು ಸಾಗಿಸಲು ಕಾತುರರಾದವರೂ ಬಂದಿರುತ್ತಾರೆ. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಕೊಂಚ ಬಡವರಾಗಿರುವವರು ಮಠಕ್ಕೆ ಒಂದಿಷ್ಟು ಮದುವೆಯ ಕಾಣಿಕೆ ಸಲ್ಲಿಸಿ ಕೆಲಸ ಸಾಂಗಮಾಡಿಕೊಂಡು ಹೋಗುತ್ತಾರೆ.

ಇಂಥ ಮದುವೆಯೊಂದು ನಡೆದಿತ್ತು. ಹೆಣ್ಣು ಗಂಡಿನ ಕೊರಳಿಗೆ ಮಾಲೆಹಾಕಲು ಒಂದು ಕಾಲು ಮುಂದಿಟ್ಟು ನಿಂತಿದ್ದಿತು. ಅವಳಿಗೆ ಹದಿನಾರರ ಹೊಸಲು ದಾಟಿದ್ದಿತು. ಮುಖ ಕಿರುಬೆವರಿನಿಂದ ಮುಸುಕಾಗಿತ್ತು.

ಸಾದುಗಪ್ಪಿನ ಹುಡುಗಿಯ ಹಣೆಯಮೇಲೆ ಹಚ್ಚಿದ ಅಗಲವಾದ ಕುಂಕುಮದ ಪಟ್ಟೆಯು ಊದಾಬಣ್ಣಕ್ಕೆ ತಿರುಗಿತ್ತು. ಹೆಣ್ಣಾಗಿ ಹುಟ್ಟಿದ್ದಕ್ಕೆ ಒಂದು ಗಂಡಿನ ಕೊರಳಿಗೆ ಮಾಲೆ ಹಾಕುವೆನಲ್ಲಾ ಎಂಬ ತೃಪ್ತಿಯನ್ನು ಅವಳ ಮುಖದಮೇಲೆ ಕಾಣಬಹುದಾಗಿತ್ತು. ತನ್ನ ಸ್ವಂತ ತೊಂದರೆ, ಹೆತ್ತು ಹೊತ್ತವರ ತೊಂದರೆ ಅಂದು ತೀರಿತಲ್ಲಾ ಎಂಬ ಕೃತಜ್ಞತೆಯ ಕಣ್ಣೀರಿನ ಹನಿ ಕಣ್ಣಾಲೆ ಸಂದಿಯಲ್ಲಿ ನರ್ತಿಸುತ್ತಿತ್ತು. ಅತ್ಯಲ್ಪ ಬೆಲೆಯ ಹಳದಿಯ ಬಣ್ಣದ ಸಂಕಲಿಕೆಯೊಂದನ್ನು ವಧುವಿಗೆ ಉಡಿಸಿದ್ದರು. ಎರೆದ ತಲೆಗೆ ಜಡೆಹಾಕದೆ ಹಾಗೆಯೇ ಗಂಟುಹಾಕಿ ಹೂ ಮುಡಿಸಿದ್ದರು. ಮದುವೆಯ ಬಗ್ಗೆ ಗಂಡಿನ ಕಡೆಯವರಿಗೆ ಅಷ್ಟೇನೂ ಆಸಕ್ತಿ ಇದ್ದಂತೆ ತೋರಲಿಲ್ಲ. ಗಂಡಿನ ತಂದೆ ಮುಖದ ಮೇಲೆ ಹಾಕಿದ್ದ ಗಂಟನ್ನು ಬಿಚ್ಚಿಯೇ ಇರಲಿಲ್ಲ. ಇದೇನೋ ಒಂದು ಕಾಟ, ಆದಷ್ಟು ಜಾಗ್ರತೆ ತೀರಿದರೆ ಸಾಕು ಎಂಬಂತಿತ್ತು ಅವನ ಮನೋಭಾವ. ಸಭಾಪೂಜೆಯ ಕಾಲಕ್ಕೆ ಹೆಚ್ಚು ಜನ ವಕ್ಕರಿಸಿ ತನ್ನ ಹಿಮ್ಮಣಿಗೆ ಸಂಚಕಾರ ತಂದಾರಲ್ಲಾ ಎಂದು ಬೆಚ್ಚಿಬೀಳುತ್ತಿದ್ದ. ಅವನ ಹೆಂಡತಿಯ ಮುಖಮುದ್ರೆ ಸಮುದ್ರದಂತೆ ಶಾಂತವಾಗಿತ್ತು. ಆಗಬೇಕಾದ ಕೆಲಸ ಆಯಿತಲ್ಲಾ ಎಂಬ ಸಂತೃಪ್ತಿಯ ಅಳಿಸದ ನಗೆಯೊಂದು ಅವಳ ಮುಖದಮೇಲಿತ್ತು. ಮದುವೆಯ ಮಂತ್ರಘೋಷಣೆ ಯಥಾಸಾಂಗವಾಗಿ ಸಾಗಿತ್ತು. ಆಕೆ ಕೈಕಟ್ಟಿ ಒಂದು ಮೂಲೆಯಲ್ಲಿ ನಿಂತಿದ್ದರು. ಕುತೂಹಲಿಗರಾದ ಹೆಂಗಸರು ಮದುವೆ ಹೆಣ್ಣಿನ ಬಗ್ಗೆ ವ್ಯಾಖ್ಯಾನ ನಡಿಸಿದ್ದರು. ಹೆಣ್ಣಿನ ತಂದೆತಾಯಿಗಳು ವಧುವಿನ ಪಕ್ಕದಲ್ಲಿಯೇ ನಿಂತಿದ್ದರು. ತಮ್ಮ ಬೆನ್ನಿನ ಮೇಲಿನ ಹೊರೆ ಅಂದು ಕಳಚಿತಲ್ಲಾ ಎಂದು ಸುದೀರ್ಘವಾಗಿ ನಿಟ್ಟುಸಿರು ಬಿಟ್ಟರು. ಮಗಳಿಗೆ ಒಳ್ಳೆಯ ಮನೆ ದೊರೆಯಿತಲ್ಲಾ ಎಂಬ ಸಂತೋಷ ಬೇರೆ. ವಧುವಿನ ಮೂರುಜನ ತಮ್ಮಂದಿರೂ ಮೂರುಜನ ತಂಗಿಯರೂ ಮಠದ ಬೇರೆಬೇರೆ ಭಾಗಗಳಲ್ಲಿ ಆಡುತ್ತಿದ್ದರು. ಹೊಸ ಅಂಗಿ ಬಟ್ಟೆಗಳನ್ನು ಎಂದೂ ಕಾಣದ ಅವರು ಅವು ಮಾಸಿಯಾವೆಂಬ ದಿಗಿಲಿನಿಂದ ಬಹಳ ಜಾಗರೂಕರಾಗಿದ್ದರು. ಬಣ್ಣಬಣ್ಣಗಳ ತಮ್ಮ ಬಟ್ಟೆಯನ್ನು ನೋಡಿಕೊಂಡು ತಾವೇ ಹಿರಿಹಿರಿ ಹಿಗ್ಗುವರು. ಲಗ್ನದವೇಳೆಯಲ್ಲಿ ಕೊಟ್ಟ ದಕ್ಷಿಣೆಯ ತೂತಿನ ಮೂರು ಕಾಸುಗಳಲ್ಲಿ ಏನಾದರೂ ಹೆಚ್ಚುಕಡಿಮೆ ಆಗಿವೆಯೋ ಹೇಗೆ ಎಂದು ಬಾರಿಬಾರಿಗೂ ಎಣಿಸಿ ನೋಡಿಕೊಳ್ಳುತ್ತಿದ್ದರು. ಹೆಣ್ಣಿನ ಅಜ್ಜಿ–

ತಂದೆಯ ತಾಯಿ–ಕೈಯಲ್ಲಿ ಒಂದು ಹಿಡಿ ಮಂತ್ರಾಕ್ಷತೆ ಹಿಡಿದುಕೊಂಡು ವಧೂವರರ ತಲೆಯ ಮೇಲೆ ಅದನ್ನು ಹಾಕಲು ಸಿದ್ಧವಾಗಿ ನಿಂತಿತ್ತು. "ಈಗ ಕಾಲ ಕೆಟ್ಟುಹೋಗಿದೆ. ನನಗೆ ಮದುವೆಯಾದಾಗ ಎಂಟೇವರ್ಷ. ಈ ವಯಸ್ಸಿಗೆ ಎರಡು ಮಕ್ಕಳಾಗಿದ್ದವು. ಅವರಿದ್ದರಲ್ಲಾ........" ಎಂದು ಈಕೆಯು ಕಾಟ ತಾಳಲಾರದೆ ಪರಲೋಕವಾಸಿಯಾಗಿದ್ದ ತನ್ನ ಗಂಡನ ನೆನಪು ತಾನೂ ಮಾಡಿಕೊಂಡು, ಎಲ್ಲರಿಗೂ ನೆನಪುಮಾಡಿಕೊಟ್ಟು ಕೆಂಪುಸೀರೆಯ ಸೆರಗನ್ನು ಕಣ್ಣಿಗೆ ಹಚ್ಚಿಕೊಂಡಳು. "ಅಂತೂ ನಾನು ಹಟ ತೊಟ್ಟಿದ್ದಕ್ಕೆ ಹುಡುಗಿಗೆ ಮದುವೆಯಾಯ್ತು. ಇಲ್ದೇಇದ್ರೆ ಈ ಪುಣ್ಯಾತ್ಮಿತ್ತಿ ಆದೆಂದು ಮದ್ವೆ ಮಾಡಕೊತಿದ್ದೋ ನಾಕಾಣೆ" ಎಂದು ವೀರಾವೇಶದಿಂದ ಜಂಬ ಕೊಚ್ಚಿಕೊಂಡಳು.

# ೨

"ಅವನಿಂದ ಹಣ ಬರುವವರೆಗೂ ನಿಷೇಕದ ಮಾತೆತ್ತಕೂಡದು. ಶುದ್ಧ ಮೋಸಗಾರ, ಮುಖ್ಯ ಪ್ರಾಣನಂತೆ ಕೈಜೋಡಿಸಿ, ತನ್ನನ್ನು ಉದ್ಧಾರ ಮಾಡಬೇಕೆಂದು ಸೆರಗೊಡ್ಡಿ ಅಂಗಲಾಚಿದ, ಎರಡು ಕಾಲುಗಳನ್ನು ಹಿಡಿದುಕೊಂಡ. ಹುಡುಗಿಯ ಮದುವೆಯಾಗದಿದ್ದರೆ ತಾನು ಆತ್ಮಹತ್ಯ ಮಾಡಿಕೊಳ್ಳುವದಾಗಿ ಬೆದರಿಕೆ ಹಾಕಿದ. ಈಗ ತನ್ನಲ್ಲಿ ಹಣವಿಲ್ಲೆಂದೂ, ದೊಡ್ಡ ಮನಸ್ಸು ಮಾಡಿ ನಿಷೇಕ ಮಾಡಿಕೊಳ್ಳಬೇಕೆಂದೂ ಬರೆದಿದ್ದಾನೆ. ದೊಡ್ಡ ಮನುಷ್ಯ'' ಎಂತ ಹೇಳುತ್ತಾ ವೆಂಕೋಬಾಚಾರಿಯು ಶತಪಥ ತಿರುಗುತ್ತಿದ್ದ. ಸಿಟ್ಟಿನಿಂದ ಅವನ ಮುಖ ಕೆಂಪೇರಿತ್ತು. ಗಂಟು ಮೂಗು ಉಚ್ಛ್ವಾಸ ನಿಶ್ವಾಸಗಳಿಂದ ಹಿಗ್ಗುತಲಿತ್ತು ಮತ್ತು ಕಿರಿದಾಗುತಲಿತ್ತು. ಬೋನಿನಲ್ಲಿ ಹಾಕಿದ ಮೃಗದಂತೆ ದಿಕ್ಕು ಕಾಣದೆ ಅತ್ತಿಂದ ಇತ್ತ ಮನೆ ಪಡಸಾಲೆಯಲ್ಲಿ ಸುಳಿದಾಡುತ್ತಿದ್ದ. ಅವನ ಹೆಂಡತಿ ವೆಂಕೂಬಾಯಿಯವರಿಗೆ ಈ ಸ್ವಗತ ಭಾಷಣ ಅರ್ಥವಾಗಲಿಲ್ಲ. ವಿಚಾರ ತಿಳಿಯುವ ಕುತೂಹಲದಿಂದ :—

"ಏನೂಂದ್ರೆ, ಯಾರಮೇಲೆ ಇಷ್ಟು ಸಿಟ್ಟು? ನಮ್ಮ ಪ್ರಾಣೇಶನ ಮೇಲೆ ಏನು ಪೇಚೂ ಬಂದಿಲ್ಲವಷ್ಟೇ? ಏನು ಸಮಾಚಾರ"

"ಸಮಾಚಾರ ಇಲ್ಲ ಗಿಮಾಚಾರ ಇಲ್ಲ. ನೋಡು ನಿನ್ನ ಬೀಗ ಕಾಗದ ಬರೆದಿದ್ದಾನೆ. ನಿನ್ನ ಸೊಸೆ ಋತುಮತಿಯಾಗಿದ್ದಾಳಂತೆ. ಆಗಿ ನಾಲ್ಕು ವರ್ಷ ಕಳೆದಿತ್ತೂ ಅನ್ನು. ನಿಷೇಕವನ್ನ ದೊಡ್ಡ ಮನಸ್ಸು ಮಾಡಿ ಮಾಡಿಕೊಳ್ಳಬೇಕಂತೆ. ಅವನು ಕೊಡಬೇಕಾಗಿರುವ ವರದಕ್ಷಿಣೆ ಹಣ ಅವನ ಹತ್ತಿರ ಇಲ್ಲವಂತೆ, ಅನುಕೂಲವಾದಾಗ ಕೊಡುತ್ತಾನಂತೆ."

"ಹಾಗೇ ಆಗಲಿ ಬಿಡಿ, ಎಲ್ಲಿ ಹೋಗುತ್ತೆ, ಅನುಕೂಲವಾದಾಗ ಕೊಡುತ್ತಾರೆ. ಕೇವಲ ಹಣಕ್ಕಾಗಿ ಆಗೋ ಕೆಲಸಾನ ಯಾಕೆ ನಿಲ್ಲಿಸಬೇಕು?"

"ನೀನು ಹೆಂಗಸು ಈ ವ್ಯವಹಾರವೆಲ್ಲ ನಿನಗೆ ಹೇಗೆ ಅರ್ಥವಾಗುತ್ತದೆ. ಈ ಸಮಯ ಬಿಟ್ಟರೆ ಅವನಿಂದ ನಾವು ಹಣ ಗಿಟ್ಟಿಸಿಕೊಳ್ಳುವದಕ್ಕಾಗುತ್ತದೆಯೇ? ಮೂಗು ಹಿಡಿದರೆ ಬಾಯಿ ಬಿಡುವಂತೆ, ನಾವು ಈಗ ಬಿಸಿಯಾದರೆ ಅವನಿಂದ ಹಣ ತಾನೇ ತಾನಾಗಿ ಉದುರುತ್ತದೆ."

ಈ ಇತ್ತಂಡ, ಅಸಂಬದ್ಧ, ಅನ್ಯಾಯದ ವಾದಕ್ಕೆ ವೆಂಕೂಬಾಯಿಯವರು ಉತ್ತರ ಕೊಡಲು ಅಸಮರ್ಥರಾದರು. ಸೊಸೆ ಬರುವ ದಿನ ಮುಂದೆ ಬೀಳುತ್ತದಲ್ಲಾ ಎಂಬ ವ್ಯಾಕುಲ ಅವರಿಗೆ. ಸಣ್ಣ ಹುಡುಗಿಯ ಹಾಗೆ ದಿನದ ಮನೆ ಕೆಲಸವನ್ನು ಮಾಡಿ ಅವರ ಕೈಕಾಲುಗಳು ಸೋತು ಹೋಗಿದ್ದವು. ಅವರೂ ರಾಕ್ಷಸ ಗಂಡನ ಮಾತಿಗೆ ಪ್ರತಿ ಹೇಳುವ ಧೈರ್ಯ ಆಕೆಗಿರಲಿಲ್ಲ. ಹಿಂದಿನ ಕಾಲದ ಹೆಣ್ಣು ಮಗಳು ಆಕೆ. ಪತಿಯೇ ದೇವರು ಎಂಬ ಧರ್ಮೋಕ್ತಿ ಇದೆಯೆಂಬುದಾಗಲೀ, ಅದರ ಅರ್ಥ ಏನೆಂಬುದಾಗಲೀ ಆಕೆಗೆ ತಿಳಿಯದು. ಆದರೆ ಅದರಂತೆ ನಡೆಯುವದೊಂದು ಆಕೆಗೆ ಗೊತ್ತು. ಗಂಡ ವೆಂಕೋಬಾಚಾರಿ ಜಮದಗ್ನಿಯ ತಮ್ಮ. ಸಿಟ್ಟು ಅವನ ಮೂಗಿನಮೇಲೆ ತಕತಕ ಕುಣಿಯುತ್ತಿತ್ತು. ಊರಿನವರು ಅವನ ಸಿಟ್ಟಿನ ಸ್ವಭಾವವನ್ನು ನೋಡಿ ಜೆಂಕಿ ವೆಂಕೋಬಾಚಾರಿ ಎಂಬ ಹೆಸರಿಟ್ಟಿದ್ದರು. ಅವನು ಸಿಟ್ಟಿನವನಾಗಿದ್ದಂತೆ ಜಿಪುಣನೂ ಆಗಿದ್ದನು. ಮದುವೆ ಮುಂಜಿ ಅಪರ ಕರ್ಮಾದಿಗಳನ್ನು ಮಾಡಿಸಲು ಎಷ್ಟು ಗಾವುದಗಳಾದರೂ ನಡೆದುಕೊಂಡು ಹೋಗಲು ಸಿದ್ಧ. ಕಾಸು ಖರ್ಚಿಲ್ಲದೆ ಸಂಸಾರ ಮಾಡಬೇಕು. ದಾನ ಧರ್ಮದ ಅಕ್ಕಿ ಬೇಳೆಗಳೇ ಸಂಸಾರಕ್ಕೆ ಸಾಕಾಗಬೇಕು. ದಕ್ಷಿಣೆ ರೂಪದಲ್ಲಿ ಬಂದ ಪುಡಿ ಕಾಸುಗಳಲ್ಲಿ ಉಳಿತಾಯವಾಗಬೇಕು.

ಕ್ಷೇತ್ರವಾಸಿಗಳ ಬಗ್ಗೆ ಅನೇಕರು ತಪ್ಪು ಅಭಿಪ್ರಾಯ ಇಟ್ಟುಕೊಂಡಿರುತ್ತಾರೆ. ಪಟ್ಟಣಿಗರು ಅಥವಾ ಬೇರೆ ಕಡೆಯವರು ಕ್ಷೇತ್ರಗಳಲ್ಲಿರುವ ವೈದಿಕರುಗಳಿಗಿಂತ ಕೋಟಿ ಪಾಲು ಉತ್ತಮ. ಹಗಲಿರುಳೂ ಅವರು ದೇವರ ಸಾನ್ನಿಧ್ಯದಲ್ಲಿರುವದರಿಂದ ಅವರಿಗೆ ದೇವರ ಹೆದರಿಕೆಯೇ ತಪ್ಪಿಹೋಗಿರುತ್ತದೆ. "Nearer to the church farther to the God" ಎಂಬ ಮಾತು ಅಕ್ಷರಶಃ ಇವರಿಗನ್ವಯಿಸುತ್ತದೆ. ಮಾಡಬಾರದ ಅನಾಚಾರಗಳನ್ನು ಮಾಡುತ್ತಾರೆ. ಅವರ ದುರಾಸೆಗೆ ಮಿತಿಯೇ ಇಲ್ಲ. ವೇದ

ಶಾಸ್ತ್ರ, ಪುರಾಣಗಳು ಇವರ ಕೈಗೆ ಸಿಕ್ಕಿ ಶಂಖ ವಾದ್ಯ ಪುಟಿಸುತ್ತಿವೆ. ತಮ್ಮ ಧನಾರ್ಜನೆಗೆ ಅವುಗಳ ನೆರವನ್ನು ಬೇಕಾದ ಹಾಗೆ ತೆಗೆದುಕೊಳ್ಳು ತ್ತಾರೆ. ಮನಸ್ವಿಯಾಗಿ ಅಪಾರ್ಥಮಾಡುತ್ತಾರೆ. ಜನರಲ್ಲಿ ಅಂಧ ಶ್ರ ಹೆಚ್ಚಿ ತಮ್ಮ ಬೇಳೆ ಬೇಯಲು ಸಹಾಯಕ ಮಾಡಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಕ್ಷೇತ್ರಸ್ಥಳಗಳಿಗೆ ಅಪರ ಕರ್ಮಾದಿಗಳನ್ನು ಮಾಡಿ ಸಲು ಜನ ಬರುವುದುಂಟು. ಇವನ್ನು ಮಾಡಿಸುವ ವೈದಿಕರು ಇವರಿಗೆ 'ಗಿರಾಕಿ' ಎಂದು ಹೆಸರಿಟ್ಟಿದ್ದಾರೆ. ಯಾರಾದರೂ ಹೆಚ್ಚು ಹಣ ಕೊಡು ವವರು ಬಂದರೆ ಅವರಿಗೆ 'ಕುರಿ' ಎಂದು ಹೇಳುತ್ತಾರೆ. ಸಂಜೆಯಾಗುತ್ತಲೇ ವೇಶ್ಯೆಯರು ಸಿಂಗರಿಸಿಕೊಂಡು ಬಾಗಿಲ ಬಳಿ ವಿಟರಿಗೆ ಕಾಯುವಂತೆ ಈ ವೈದಿಕರು ರೇಲ್ವೆ ಸ್ಟೇಷನ್‌ಗಳಿಗೆ ಹೋಗುತ್ತಾರೆ. 'ಗಿರಾಕಿ' ಯನ್ನು ಹಿಡಿದು ಅವರನ್ನು ನೇರವಾಗಿ ತಮ್ಮ ಮನೆಗೆ ಕರೆದೊಯ್ಯುತ್ತಾರೆ. ಭೂದಾನ, ಗೋದಾನ, ಸುವರ್ಣದಾನ, ಎಲ್ಲ ದಾನ ಧರ್ಮಾದಿಗಳನ್ನು ಸೇರಿಸಿ, ಗಿರಾಕಿ ಎಷ್ಟು ಹಣ ಕೊಡಬಹುದೆಂಬುದನ್ನು ಮೊದಲೇ ಅಂದಾಜು ತಿಳಿದುಕೊಂಡು ಒಂದು ಅಂಕಿಯನ್ನು ಹೇಳುತ್ತಾರೆ. ಈ ಅಂಕಿ ಇಪ್ಪತ್ತು ರೂಪಾಯಿಗಳಿಂದ ಹಿಡಿದು ಐದು ನೂರು ರೂಪಾಯಿಗಳಾಗಬಹುದು. ಕೇವಲ ಇಪ್ಪತ್ತು ರೂಪಾಯಿಗಳಲ್ಲಿ ಭೂದಾನ, ಗೋದಾನ, ಸುವರ್ಣದಾನಗಳೂ, ಊಟ ದಕ್ಷಿಣೆ ಮತ್ತು ಇತರ ವೆಚ್ಚಗಳೂ ಅಡಕವಾಗುತ್ತವೆ. ಅದು ಹೇಗೆ ಅಡಕ ವಾಗುತ್ತದೆಂಬುದು ಚಿದಂಬರ ರಹಸ್ಯ. ಐನೂರು ರೂಪಾಯಿ ಖರ್ಚು ಮಾಡಿದವರ ಪಿತೃಗಳು ಯಾವ ಸ್ವರ್ಗಕ್ಕೆ ಹೋಗುವರೋ ಇಪ್ಪತ್ತು ರೂಪಾಯಿ ಖರ್ಚುಮಾಡಿದವರ ಪಿತೃಗಳು ಯಾವ ಸ್ವರ್ಗಕ್ಕೆ ಹೋಗುವರೋ, ಅದನ್ನು ಹೇಳುವರಾರು ? ಅಂತೂ ಸುಲಿಗೆಯ ಕ್ರಮವಂತೂ ಯಥಾಸಾಂಗವಾಗಿ ಸಾಗುತ್ತದೆ. ಬಂದ 'ಗಿರಾಕಿ' ರೈಲು ಚಾರ್ಜು ಉಳಿಸಿಕೊಂಡು ಊರು ಕಾಣುವದರಲ್ಲಿ ಸಾಕು ಸಾಕಾಗಿ ಹೋಗುತ್ತದೆ.

ಒಂದು ಸಾರಿ ಗೃಹಸ್ಥರೊಬ್ಬರು ನದಿ ಊಟಕ್ಕೆಂದು ತಮ್ಮ ಗರ್ಭಿಣಿ ಹೆಂಡತಿಯನ್ನು ಕರೆದುಕೊಂಡು ಕ್ಷೇತ್ರವೊಂದಕ್ಕೆ ಬಂದರು. ತಾವು ಹತ್ತಿದ ಊರಿನಲ್ಲಿ ರೈಲಿನಲ್ಲಿ ವಿಪರೀತ ಗಲಾಟೆ ಇದ್ದುದರಿಂದ ಹೆಂಡತಿಯನ್ನು ಹೆಂಗಸರ ಗಾಡಿಯಲ್ಲಿ ಕುಳ್ಳಿರಿಸಿ ತಾವು ಬೇರೆ ಗಾಡಿ ಹತ್ತಿದ್ದರು. ಸರಿ.

ಊರು ಬರುತ್ತಲೇ ಮೂರು ಜನ ವೈದಿಕರು ಅವರನ್ನು ಜಟಕಾಗಾಡಿಯವರು, ಕೂಲಿಯವರು ಮುತ್ತುವಂತೆ ಮುತ್ತಿದರು. ಅಪರ ಕರ್ಮಾದಿಗಳನ್ನು ಹೆಚ್ಚು ವೆಚ್ಚವಿಲ್ಲದೆ ಸಾಂಗವಾಗಿ ಮಾಡಿಸುವದಾಗಿ ಆ ಮನುಷ್ಯನಿಗೆ ಆಶ್ವಾಸನ ವಿತ್ತರು. ಆ ಮನುಷ್ಯ ಬಳಸಿದ ಭಾಷೆಯನ್ನು ಇಲ್ಲಿ ಬರೆಯುವುದು ಶೀಲಕ್ಕೆ ವಿರೋಧವಾದುದರಿಂದ ಬಿಟ್ಟಿದ್ದೇನೆ.

ಸತ್ತವರನ್ನು ಸ್ವರ್ಗಕ್ಕೆ ಕಳಿಸುವ ಅವಾಂತರದಲ್ಲಿ ಬದುಕಿರುವವರು ನರಕವನ್ನು ಸೇರಬೇಕಾಗುತ್ತದೆ. ಸತ್ತವರ ಬಗ್ಗೆ ತಮಗಿರುವ ಅಭಿಮಾನ ಅವರಿಗೆ ಸದ್ಗತಿ ಕಾಣಿಸಬೇಕೆಂಬ ಸದಪೇಕ್ಷೆಗಿಂತ ಸಮಾಜ ತಮ್ಮ ವಿಚಾರ ದಲ್ಲಿ ಏನು ಆಡಿಕೊಂಡೀತೋ ಎಂಬ ದಿಗಿಲು ಅವರನ್ನು ಬಾಧಿಸುತ್ತದೆ. ಸತ್ತ ಮನುಷ್ಯ ತಣ್ಣಗೆ ಬಾಯಿಮುಚ್ಚಿಕೊಂಡು ಯಾವುದನ್ನೂ ಅಪೇಕ್ಷಿಸದೆ ದಾರಿ ಬಿಟ್ಟಿರುತ್ತಾನೆ. ಆದರೆ ಇದ್ದವರು ತಮಗೆ ಎಲ್ಲಿ ರವರವ ನರಕ ಒದಗಿಸಿ ಯಾರೋ ಎಂಬ ದಿಗಿಲಿನಿಂದ ತತ್ತರಿಸಿ ಹೋಗಿರುತ್ತಾರೆ.

ಮದುವೆ ಮುಂಜಿ ಮುಂತಾದ ಶುಭಕೆಲಸಗಳಿಗೆ 'ಸಿವಿಲ್' ಎಂದೂ ಅಪರ ಕರ್ಮಾದಿಗಳಿಗೆ 'ಕ್ರಿಮಿನಲ್' ಎಂದೂ ಹೆಸರು ಕೊಟ್ಟಿದ್ದಾರೆ. ಸಿವಿಲ್ ಕೇಸ್‌ಗಳಿಗಿಂತ ಕ್ರಿಮಿನಲ್ ಕೇಸ್‌ಗಳಿಗೇ ಹೆಚ್ಚು ದುಡ್ಡು. ಮದುವೆ ಮುಂಜಿ ಕಾರ್ಯಗಳಲ್ಲಿ ಈ ಪದ್ಧತಿ ನಮ್ಮ ಮನೆಯಲ್ಲಿಲ್ಲ ಎಂದು ಪುರೋಹಿತರ ಬಾಯಿಮುಚ್ಚಿಸಬಹುದು. ಅವರು ದುಡ್ಡಿಗೆ ಹಾಕಿರುವ ವರಸೆಗೆ ಇದಿರು ವರಸೆ ಹಾಕಬಹುದು. ಆದರೆ ಅಪರ ಕಾರ್ಯಗಳಲ್ಲಿ ಪುರೋಹಿತನ ಕೈಯೇ ಮೇಲು. ಹೂವು ಇಲ್ಲವಾದರೂ ದಳವನ್ನಾದರೂ ಕೊಟ್ಟೇ ತೀರಬೇಕು.

ಕಸಬುದಾರರು ತಮ್ಮ ಅಂಗಡಿಗಳ ಮುಂದೆ ತಮ್ಮ ಕಸಬನ್ನು ಸೂಚಿ ಸುವ ಬೋರ್ಡುಗಳನ್ನು ಹಾಕಿಕೊಂಡಿರುತ್ತಾರೆ. ಹಜಾಮರು ಕತ್ತಿ ಕತ್ತರಿ ಗಳನ್ನೂ ಮೋಟಾರ್ ಸ್ಪೇರ್ ಪಾರ್ಟ್ಸ್ ಅಂಗಡಿಯವರು ಮೋಟಾರಿಗೆ ಸಂಬಂಧಿಸಿದ ಸಾಮಾನುಗಳನ್ನೂ ಬೋರ್ಡಿನಮೇಲೆ ಬರೆಯಿಸಿರುತ್ತಾರೆ. ಇದರಂತೆ ಇತರ ಕಸಬುದಾರರು ತಮ್ಮ ಕಸಬಿನ ಸೂಚಕವಾದ ಸಾಮಗ್ರಿ ಗಳನ್ನು ಬರೆಯಿಸಿರುತ್ತಾರೆ. ಇದರಂತೆ ಸಿವಿಲ್ ವೈದಿಕರು ಮದುವೆ ಮಂಟಪ, ಜನಿವಾರಗಳನ್ನೂ ಕ್ರಿಮಿನಲ್ ವೈದಿಕರು ಚಟ್ಟ, ಗಡಿಗೆಗಳನ್ನೂ

ಬರೆಯಿಸಿ ಬೋರ್ಡುಗಳನ್ನು ಅವರ ಮನೆಯ ಮುಂದೆ ತೂಗ ಬಿಟ್ಟರೆ ಜನರಿಗೆ ಅನುಕೂಲವಾದೀತು.

ವೆಂಕೋಬಾಚಾರಿಯು ಸಿವಿಲ್ ಮತ್ತು ಕ್ರಿಮಿನಲ್ ಎರಡರಲ್ಲೂ ಕೆಲಸಮಾಡುತ್ತಿದ್ದನು. ಇವನ ತಂದೆ ಸಾಯುವಾಗ ಇವನಿಗೆ ಮಂತ್ರಗಳ ವಿನಾ ಮತ್ತಾವ ಪಿತ್ರಾರ್ಜಿತ ಆಸ್ತಿಯೂ ಇರಲಿಲ್ಲ. ಆದರೆ ವೆಂಕೋಬಾಚಾರಿ ಗಟ್ಟಿಗ. ಊಟ ಸಿಕ್ಕು ಮೇಲೆ ಹಣ ಸಿಗುವ ಈ ವೈದಿಕ ವೃತ್ತಿಯನ್ನು ಚೆನ್ನಾಗಿ ರೂಢಿಸಿಕೊಂಡ. ಸಂಸ್ಕೃತದ ಗಂಧ ಗಾಳಿ ಇಲ್ಲದಿದ್ದರೂ ವೃತ್ತಿಗೆ ಸಂಬಂಧಪಟ್ಟ ಎಲ್ಲಾ ಮಂತ್ರಗಳನ್ನೂ ಗಿಳಿಪಾಠ ಮಾಡಿದ. ಹಣ ಸೇರಿದಂತೆ ಅವನ ದುರಾಸೆ ಹೆಚ್ಚಾಗುತ್ತ ಬಂದಿತು. ಕೈಗೆ ಬಂದ ಹಣ ಅದೆಂದೂ ಸೂರ್ಯದರ್ಶನಮಾಡುವಂತಿಲ್ಲ. ಹತ್ತು ಇಪ್ಪತ್ತು ರೂಪಾಯಿಗಳು ನೂರಾದವು. ನೂರು ಸಾವಿರವಾಯಿತು. ಸಾವಿರ ಏಳೆಂಟು ಸಾವಿರವಾಯಿತು. ಊರಿನ ಪಕ್ಕದಲ್ಲಿಯೇ ಇದ್ದ ಒಂದು ಜಮೀನು ತೆಗೆದಿದ್ದ. ಮೂರು ನಾಲ್ಕು ಸಾವಿರ ರೂಪಾಯಿಗಳನ್ನು ಬಡ್ಡಿಗೆ ಕೊಟ್ಟಿದ್ದ. ಹೊರಗಿನ ಊಟ ಇಲ್ಲದದಿನ ಮನೆಯಲ್ಲಿ ತಿನ್ನುವುದು ಕದನ್ನ. ಇತರರ ಮನೆ ಅಡಿಗೆ ಊಟದಬಗ್ಗೆ ಅವನು ಬೇಕಾದಷ್ಟು ಟೀಕಿಸುತ್ತಿದ್ದರೂ ತಾನು ತಿನ್ನುತ್ತಿದ್ದ ಊಟ ನಾಯಿಯೂ ಮುಟ್ಟದು. ಊಟದಲ್ಲಿ ವೈದಿಕರನ್ನು ತೃಪ್ತಿಪಡಿಸುವುದು ಅಸಾಧ್ಯ ಎಂಬುದಕ್ಕೆ ಒಂದು ಸ್ವಾರಸ್ಯ ಕತೆಯಿದೆ.

ರಾಜನೊಬ್ಬ ಊರಿನ ವೈದಿಕ ಬ್ರಾಹ್ಮಣರಿಗೆಲ್ಲ ದೊಡ್ಡದೊಂದು ಸಂತರ್ಪಣೆ ಏರ್ಪಡಿಸಿದ. ಭಕ್ಷಭೋಜ್ಯಗಳು ಎನ್ನುವವು ಎಷ್ಟಿವೆಯೋ ಅಷ್ಟನ್ನೂ ಮಾಡಿಸಿದ್ದ. ಒಂದೊಂದು ಎಲೆಗೆ ಬಡಿಸುವುದಕ್ಕೆ ಐದೈದು ಜನ ಪರಿಚಾರಕರನ್ನು ನೇಮಿಸಿದ್ದ. ಊಟವಾಗಿ ತಾಂಬೂಲ ಸಮಾರಂಭ ಮುಗಿಯಿತು. ಕೈತುಂಬ ದಕ್ಷಿಣೆಯೂ ದೊರೆಯಿತು. ಎಲ್ಲರೂ ತೃಪ್ತಿಯ ನಗೆ ಸೂಸಿ ರಾಜನನ್ನು ಮುಕ್ತಕಂಠದಿಂದ ಹೊಗಳಿ ಹೊರಟರು.

ತನ್ನ ಸಂತರ್ಪಣೆ ಬಗ್ಗೆ ಈ ಜನ ಏನು ಮಾತನಾಡಿಕೊಳ್ಳುತ್ತಾರೆಂಬುದನ್ನು ತಿಳಿಯಲು ನದಿಯ ಕಡೆ ರಾಜ ಸಾಗಿದ. ಸಂಜೆ, ಮಸುಕಾಗಿತ್ತು. ಸಂಧ್ಯಾವಂದನೆ ಮಾಡಲು ಊಟ ಮಾಡಿದ್ದ ವೈದಿಕರು ನದಿಗೆ ಬಂದಿದ್ದರು. ಆದಿನದ ಊಟದ ವರ್ಣನೆ ಭವ್ಯವಾಗಿ ಸಾಗಿತ್ತು. ಏನು ಲಾಡು ! ಏನ್ನ

ಭಾತು! ಕೇಸರಿಯ ನೀರು! ಕಸ್ತೂರಿಯ ವೀಳ್ಯ! ಒಂದೊಂದು ವರಹ ದಕ್ಷಿಣೆ! ಇದ್ದರೆ ನಮ್ಮ ರಾಜನಂತೆ ಇರಬೇಕು, ಅವನ ಸಂತಾನ ಕೋಟಿಯಾಗಲಿ! ಎಂತ ಆಶೀರ್ವದಿಸಿದರು. ಅದರಲ್ಲಿ ಒಬ್ಬನೆದ್ದು ಹೇಳಿದ, "ಎಲ್ಲಾ ಸರಿ ನಮಗೆ ಹಚ್ಚಿಕೊಳ್ಳಲು ಕೊಟ್ಟಿದ್ದ ಈ ಗಂಧ ಮತ್ತು ಅಕ್ಷತೆ ಬಹಳ ನೀರಾಗಿತ್ತು. ಅವು ಸ್ವಲ್ಪ ಗಟ್ಟಿಯಾಗಿದ್ದರೆ ಸಂತರ್ಪಣೆಗೆ ಇನ್ನೂ ಹೆಚ್ಚಿನ ಕಳೆ ಏರುತ್ತಿತ್ತು" ಎಂದು ಹೇಳಿದ. ರಾಜನಿಗೆ ಸಿಡಿಲು ಬಡಿದಂತಾಯಿತು. ಅಂತೂ ಏನೋ ಒಂದು ತಪ್ಪು ಇವರಿಗೆ ಸಿಕ್ಕಿತಲ್ಲಾ ಎಂದುಕೊಂಡ. ಎಷ್ಟು ಮಾಡಿದರೂ ಈ ಜನ ಹೊಲಸು ಮಾತನಾಡುವುದನ್ನು ಬಿಡರು ಎಂದು ತನ್ನಷ್ಟಕ್ಕೆ ತಾನೇ ಸಮಾಧಾನಪಟ್ಟುಕೊಂಡು ಅರಮನೆ ಕಡೆ ತೆರಳಿದ.

ವೆಂಕೋಬಾಚಾರಿಯ ಹೆಂಡತಿ ಬಡವರ ಮನೆ ಹೆಣ್ಣುಮಗಳು. ಹುಟ್ಟಿದ ಮನೆಗಿಂತ ಹೊಕ್ಕ ಮನೆ ಸಾಕಷ್ಟು ಅನುಕೂಲವಾಗಿತ್ತೆಂದು ಹೇಳಬಹುದು. ಆದರೆ ಹಣವಿದ್ದ ಗಂಡನನ್ನು ಮದುವೆಯಾದರೂ ಋಣವಿದ್ದಷ್ಟೇ ಸಿಕ್ಕುವುದು ಎಂಬಂತೆ ಆಕೆಯ ಆಸೆಗಳಾವವೂ ಈಡೇರುವಂತಿರಲಿಲ್ಲ. ಸಾಮಾನ್ಯವಾಗಿ ತಿಂಗಳಿಗೆ ಹದಿನೈದು - ಇಪ್ಪತ್ತು ದಿನಗಳ ಊಟ ಹೊರಗೇ ಕಳೆದು ಹೋಗುವುದು. ಉಳಿದ ಬಿಡಿ ದಿನಗಳಲ್ಲಿ ಏನೋ ಇಷ್ಟನ್ನು ಬೇಯಿಸಿದರಾಯಿತು. ವೆಂಕೋಬಾಚಾರಿ ಕೊಂಡುಕೊಟ್ಟ ಸೀರೆ ಕುಪ್ಪಸಗಳನ್ನು ಉಟ್ಟ ನೆನಪಂತೂ ಆಕೆಗೆ ಇಲ್ಲವೇ ಇಲ್ಲ. ದಾನಕ್ಕಾಗಿ ಕೊಡುವ ಸೀರೆ ಕುಪ್ಪಸಗಳು ಊರುಮಾರಮ್ಮನಿಗೆ ಉಡಿಸುವಂಥವಿರುತ್ತವೆ. ಆ ಬಗ್ಗೆ ಪ್ರತಿಭಟಿಸುವ ದಾಷ್ಟೀಕ ಆಕೆಗಿಲ್ಲ. ಮನುಷ್ಯರಲ್ಲಿಯೂ ನಾವು ಪ್ರಾಣಿವರ್ಗಗಳನ್ನು ಕಾಣಬಹುದೆಂದು ಮನಶ್ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ವೆಂಕೂಬಾಯಿ ಇರಿಯದ, ಒದೆಯದ ಒಂದು ಸಾಧು ಹಸು, ಗಿಡ್ಡನೆಯ ದಪ್ಪ ಹೆಂಗಸು! ಮುಂಭಾಗಕ್ಕಿಂತ ಹಿಂಭಾಗವೇ ಹೆಚ್ಚಾಗಿತ್ತು. ಅಗಲವಾದ ಮುಖ. ನಡುಹುಬ್ಬಿನಿಂದ ಬೈತಲುವರೆಗೂ ಉದ್ದನೆ ಕುಂಕುಮ. ಆಕೆ ಉಟ್ಟ ಸೀರೆ ಬಣ್ಣ ಕದಡಿದ್ದರಿಂದ ಮೊದಲು ಯಾವ ಬಣ್ಣದ್ದಿತ್ತೆಂದು ಹೇಳಲು ಬರುವದಿಲ್ಲ. ಎಂಥ ಸನ್ನಿವೇಶ ಒದಗಿದರೂ ಧೃತಿಗೆಡುವ

ಸ್ವಭಾವ ಈಕೆಯದಲ್ಲ. ಗಂಡ ಸಿಟ್ಟು ಮಾಡುವುದಾಗಲಿ ಅವನ ಜಿಪುಣ ತನವಾಗಲೀ ತನ್ನ ಗ್ರಹಚಾರವೆಂದು ತಿಳಿದಿದ್ದಾಳೆ.

ಗ್ರಹಚಾರ, ಕರ್ಮ ಮತ್ತು ಅದೃಷ್ಟ ಈ ಶಬ್ದಗಳಿಲ್ಲದಿದ್ದರೆ ನಮ್ಮ ಜನ, ಆದರಲ್ಲಿಯೂ ಹೆಂಗಸರು ಏನಾಗುತ್ತಿದ್ದರೋ ಹೇಳಲು ಬರುವುದಿಲ್ಲ. ಗಂಡನ ಬಡತನ, ಅವನ ಸಿಟ್ಟು ಶಾಂತ ಮುಂತಾದ ಗುಣಗಳು, ಸೂಳೆ ಬಾಕತನ, ಜೂಜಾಟ ಮುಂತಾದ ದುಶ್ಚಟಗಳು ಹೆಂಡತಿಯ ಅದೃಷ್ಟ ಮತ್ತು ಕರ್ಮದ ಪಟ್ಟಿಯಲ್ಲಿ ಸೇರಿ ಹೋಗುತ್ತವೆ. ಇವುಗಳ ಬಗ್ಗೆ ಪ್ರತಿ ಭಟಿಸಬೇಕೆಂಬ ಅರಿವು ಸಹಾ ಆಕೆಗೆ ಇರುವದಿಲ್ಲ. ಎಲ್ಲವನ್ನೂ ತನ್ನ ಹೊಟ್ಟೆಯೊಳಗೆ ಹುದುಗಿಸಿಟ್ಟುಕೊಂಡಿರುವ ಸಮುದ್ರದಂತೆ ಇರುತ್ತದೆ ಆಕೆಯ ನಡತೆ. ಇನ್ನು ಒಂದು ವೇಳೆ ಆಕೆ ಪ್ರತಿಭಟಿಸಿದರೆ ದಿನವೂ ಮರಿ ಯುದ್ಧಗಳಾಗುವದರಲ್ಲಿ ಸಂಶಯವಿಲ್ಲ. ಆಕೆ ಹುಟ್ಟಿದಂದಿನಿಂದ ಪತಿಯೇ ದೇವರು ಎಂದು ಆಕೆಯ ಕಿವಿಗಳಲ್ಲಿ ಊದಿರುತ್ತಾರೆ. ದೇವರು ತಪ್ಪು ಮಾಡುವದುಂಟೆ ?

ವೆಂಕೂಬಾಯಿಗೆ ತನ್ನ ಗಂಡನ ಮನೆಯಲ್ಲಿ ಯಾವ ಸುಖವೂ ಇರಲಿಲ್ಲ. ಬೆಳಗಿನ ಜಾವ ಕೋಳಿ ಕೂಗುವ ಹೊತ್ತಿಗೆ ಎದ್ದು ಗಾಣದ ಎತ್ತಿನಂತೆ ದುಡಿಯಬೇಕು. ಆ ದುಡಿತಕ್ಕೆ ಪ್ರತಿಫಲವೆಂದರೆ ಎರಡು ನಿಷ್ಠೂರದ ಮಾತುಗಳು. ಹೇಗೂ ನಿಷ್ಠೂರಕ್ಕೆ ಗುರಿಯಾಗಬೇಕು. ದುಡಿಯುವ ದಾದರೂ ಏಕೆ ಎಂದು ಸುಮ್ಮನೆ ಕೂತು ನೋಡಿದರು. ಆದರೆ ಅಭ್ಯಾಸ ಬಲದಿಂದ ಹಾಗೆ ಕುಳಿತುಕೊಳ್ಳಲೂ ಸಾಧ್ಯವಿಲ್ಲ. ದುಡಿತದ ಪಾಡಿಗೆ ದುಡಿತ, ಕೆಲಸದಪಾಡಿಗೆ ಕೆಲಸ, ನಿಷ್ಠೂರದಪಾಡಿಗೆ ನಿಷ್ಠೂರ.

ಮದುವೆಯಾದ ಕೆಲವು ವರ್ಷಗಳಮೇಲೆ ವೆಂಕೋಬಾಚಾರಿಗೆ ಪೂಂಾ ದಿಗಿಲಾಗಲಾರಂಭವಾಯಿತು. ತನ್ನ ಹೆಂಡತಿ ಗರ್ಭವತಿಯಾಗಲಿಲ್ಲವೆಂದು ಮನಸ್ಸಿನಲ್ಲಿಯೇ ನೊಂದುಕೊಂಡ "ಅಪುತ್ರಸ್ಯ ಗತಿರ್ನಾಸ್ತಿ" ಯಾಗುವ ದೆಂದು ಯೋಚಿಸತೊಡಗಿದ. ಮೊದಮೊದಲು ಈ ಬಗ್ಗೆ ಮನಸ್ಸಿನಲ್ಲಿಯೇ ಗುಣಾಕಾರ ಭಾಗಾಕಾರ ಹಾಕುತ್ತಿದ್ದವನು ಪ್ರಕಟವಾಗಿಯೇ ಹೆಂಡತಿಯನ್ನು ಬಯ್ಯಲಾರಂಭಿಸಿದ. ತನಗೆ ಒಳ್ಳೊಳ್ಳೆಯ ಕಡೆ ಬಂದ ಕನ್ಯೆಗಳನ್ನು ಬಿಟ್ಟು ಬಂಧುವರ್ಗದಲ್ಲಿ ಸಂಬಂಧ ಬೆಳಸಿದುದು ತಪ್ಪಾಯಿತೆಂದು ಹೇಳು

ವನು. ತನ್ನ ವಂಶೋದ್ಧಾರವಾಗಲೆಂದು ಹಲವು ದೇವರಿಗೆ ಹರಕೆ ಹೊತ್ತ. ತಲೆ ಸುತ್ತುವವರೆಗೂ ಗಂಡಹೆಂಡತಿಯರಿಬ್ಬರೂ ಅಶ್ವತ್ಥಪ್ರದಕ್ಷಿಣೆ ಮಾಡಿದರು. ಗಣಪತಿಯನ್ನು ಸೆರೆಹಾಕಿದರೆ ಮಕ್ಕಳಾಗುತ್ತವೆಂದು ಯಾರೋ ಹೇಳಿದ್ದನ್ನು ಕೇಳಿ ಆ ಕೆಲಸವನ್ನೂ ಮಾಡಿದ್ದಾಯಿತು. ವಿನಾಯಕ ಚತುರ್ಥಿಯ ದಿನ ತಂದ ಗಣಪತಿಯನ್ನು ಒಂದು ಮಾಡದಲ್ಲಿ ಕೂಡಿಸುವುದು. ಆಮೇಲೆ ಅದನ್ನು ಕ್ರಮವಾಗಿ ವಿಸರ್ಜಿಸುವುದು ಬಿಟ್ಟು ಆ ಮಾಡವನ್ನು ಒಂದು ತಡಿಕೆಯಿಂದ ಪೂರ್ತಿಯಾಗಿ ಮುಚ್ಚುವುದು. ಆಜನ್ಮ ಬ್ರಹ್ಮಚಾರಿಯಾದ ಗಣಪತಿಗೆ ಮಕ್ಕಳ ವರ ಕೊಡೆಂದು ಪೀಡಿಸುವ ಹಿಂಸಾ ವಿಧಾನ ನೋಡಿದರೆ ಯಾರಿಗೆ ತಾನೇ ನಗು ಬರುವುದಿಲ್ಲ. ಸೆರೆಸಿಕ್ಕ ಗಣಪತಿಯು ತನಗೆ ಶಿಕ್ಷೆ ಕೊಟ್ಟವರಿಗೆ ವರ ಕೊಡಲು ಹಿಂದೆ ಮುಂದೆ ನೋಡಲೂಬಹುದು. ಮನಸ್ಸಿಲ್ಲದಿದ್ದರೂ ಈ ನೆವದಲ್ಲಿ ಹತ್ತಿರದಲ್ಲಿಯೇ ಇರುವ ಅನೇಕ ತೀರ್ಥ ಕ್ಷೇತ್ರಗಳಿಗೆ ಭೇಟಿ ಕೊಟ್ಟರು. ಆದರೆ ಇದಾವುದೂ ಫಲಿಸಲಿಲ್ಲ.

ತನ್ನ ಆಜನ್ಮಶತ್ರುವು ಸಹ ಬಂಜೆಯಾಗಬಾರದೆಂದು ಹೆಣ್ಣು ಬಯಸುತ್ತದೆ. ಹೆಂಗಸು ಯಾವ ಶಿಕ್ಷೆಯನ್ನಾದರೂ ಅನುಭವಿಸಿಯಾಳು. ಆದರೆ 'ಬಂಜೆ' ಎಂಬ ಚೀಟಿಯನ್ನು ಅಂಟಿಸಿಕೊಳ್ಳಲು ಇಷ್ಟಪಡುವುದಿಲ್ಲ. ವೆಂಕೂಬಾಯಿಯವರ ಮೂಕ್ವೇದನೆಗೆ ಮತ್ತೊಂದು ಆಘಾತ ಬಿತ್ತು. ವೆಂಕೋಬಾಚಾರಿ ಎರಡನೆಯ ಮದುವೆ ಮಾಡಿಕೊಳ್ಳಲು ಹವಣಿಸುತ್ತಿದ್ದ. ಬಡವರ ಮನೆಯಲ್ಲಿದ್ದ ಬೆಳೆದ ಕನ್ಯೆಗಳ ಬಗ್ಗೆ ಪ್ರಸ್ತಾಪ ನಡೆಸಿದ್ದ. ಇತ್ತೀಚೆಗೆ ಅವನ ವೇಷಭೂಷಣಗಳಲ್ಲಿ ಹೆಚ್ಚಿನ ಮಾರ್ಪಾಡಾಯಿತು. ಸಾಬೂನು ಹಾಕಿ ಒಗೆದ ಪಂಚೆ ಮತ್ತು ಉತ್ತರೀಯ, ತಿಥಿ ದೋಷಗಳನ್ನು ಗಣನೆಗೆ ತಾರದೆ ಕ್ಷೌರಮಾಡಿಸಿಕೊಂಡ ದುಂಡುಮುಖ. ಮುದ್ದಾಗಿ ಕನ್ನಡಿ ನೋಡಿಕೊಂಡು ಹಚ್ಚಿಕೊಂಡಿರುವ ಮುದ್ರೆ ಮತ್ತು ದ್ವಾದಶನಾಮ. ಹುಬ್ಬಿನ ನಡುವೆ ಕಂಡೂಕಾಣದಂತಹ ಅಂಗಾರಕ್ಷತೆ. ವೆಂಕೋಬಾಚಾರಿಯು ತನ್ನ ತಲೆಗೆ ಯಾವ ಅಲಂಕಾರ ಮಾಡುವ ಆವಶ್ಯಕತೆಯೂ ಇರಲಿಲ್ಲ. ಬೆಳಗಿದ ತಾಮ್ರದ ತಂಬಿಗೆಯಂತಿತ್ತು. ವಯಸ್ಸಾದಹಾಗೆ ಬಟ್ಟತಲೆ ಆಗಿತ್ತು. ಅದನ್ನು ಮುಚ್ಚಲು ಅವನು ತನ್ನ ಉತ್ತರೀಯದಮೇಲೆ ಒಂದು ಹಸಿರು ಶಾಲನ್ನು ಹೊದೆಯಲಾರಂಭಿಸಿದ್ದಾನೆ. ವೆಂಕೂಬಾಯಿಯ ಅಕ್ಕಪಕ್ಕದ

ಮನೆಗಳಲ್ಲಿರುವ ಅವರ ಸ್ನೇಹಿತರು ವೆಂಕೋಬಾಚಾರಿಯ ಬಟ್ಟ ತಲೆ ಬಗ್ಗೆ ಹಾಸ್ಯಮಾಡುವುದುಂಟು. "ವೆಂಕೂಬಾಯಿಯವರೇ ನಿಮ್ಮ ಯಜಮಾನರು ತಲೆಗೆ ಸಾಬೂನು ಹಚ್ಚುತ್ತಾರೋ, ಅಥವಾ ಹುಣಸೆಹಣ್ಣು ಹಚ್ಚುತ್ತಾರೋ ?" "ನೀವು ಕುಂಕುಮ ಹಚ್ಚಿಕೊಳ್ಳುವಾಗ ನಿಮಗೆ ಕನ್ನಡಿ ಬೇಕಿಲ್ಲ, ಕನ್ನಡಿಯಂತೆ ಥಳಥಳ ಹೊಳೆಯುವ ನಿಮ್ಮ ಯಜಮಾನರ ತಲೆಯನ್ನು ನೋಡೇ ಕುಂಕುಮ ಹಚ್ಚಿಕೊಳ್ಳಬಹುದು." ಇಂಥ ಹಾಸ್ಯ ಮಾತುಗಳಿಗೆ ಪ್ರತಿಯಾಗಿ ಆಡುವ ದಾಷ್ಟಿಕವಾಗಲೀ ಬುದ್ಧಿವಂತಿಕೆಯಾಗಲೀ ವೆಂಕೂಬಾಯಿಯವರಿಗಿರಲಿಲ್ಲ.

ನಿಜಕ್ಕೂ ವೆಂಕೋಬಾಚಾರಿ ನೋಡುವುದಕ್ಕೆ ಚೆನ್ನಾಗಿದ್ದಾನೆ. ಅವನ ಮುಖವು 'ಕಂಪಾಸ್'ನಿಂದ ಕೊರೆದಷ್ಟು ದುಂಡಗಿದೆ. ವಯಸ್ಸು ಅವನ ಮುಖದ ಮೇಲೆ ತನ್ನ ಪ್ರಭಾವವನ್ನು ಬೀರಿಲ್ಲ. ನಿರ್ಯೋಚನೆಯಿಂದ ಸಂಸಾರ ಸಾಗುತ್ತಿದೆ. ಸಾಕಷ್ಟು ಅನುಕೂಲ ದಾಂಪತ್ಯ. ಮೇಲೆ ರುಚಿರುಚಿಯಾದ ಪುಷ್ಟಿಕರವಾದ ರಸಗವಳ ಬೀಳುತ್ತಿರುತ್ತದೆ. ಮೈ ನಲುಗಿಸಿ ಕಷ್ಟಪಟ್ಟು ಕೆಲಸಮಾಡುವ ಪ್ರಮೇಯವಿಲ್ಲ. ಅವನ ಹೊಳೆಯುವ ತುಂಟಕಣ್ಣುಗಳನ್ನು ನೋಡಿದರೆ ಅವನ ಹೃದಯಾಂತರಾಳಕ್ಕೆ ಪಾತಾಳಗರಡಿ ಹಾಕಬಹುದು. ಯಾರು ನೋಡಿದರೂ "ಈ ಆಸಾಮಿ ಕಮ್ಮಿ ನೀರಿನಲ್ಲಿ ಮುಳುಗುವುದಿಲ್ಲ" ಎಂದು ತಟ್ಟನೆ ಯಾವ ಆಲೋಚನೆಯನ್ನೂ ಮಾಡದೆ ಹೇಳಬಹುದು.

ವೆಂಕೋಬಾಚಾರಿ ಮತ್ತೆ ಮದುವೆ ಮಾಡಿಕೊಳ್ಳಲು ನಿರ್ಧರಿಸಿದ್ದರೂ ಅನೇಕ ಸಮಸ್ಯೆಗಳಿಂದಾಗಿ ಅವನ ಮನಸ್ಸು ತುಯ್ಯಲಾಡುತ್ತಿತ್ತು. ತನಗೆ ಯಾರಾದರೂ ಈ ಅಪರ ವಯಸ್ಸಿನಲ್ಲಿ ಇನ್ನೊಂದು ಹೆಣ್ಣು ಕೊಡುವರೆ? ಒಂದುವೇಳೆ ಕೊಟ್ಟರೆ ಅದೆಂಥ ಹೆಣ್ಣು ಮನೆಗೆ ಬರುತ್ತದೊ ? ಪಾಪಿ ಪರದೇಶಿಯಾದ ವೆಂಕೂಬಾಯಿಯನ್ನು ಕಳಿಸುವುದಾದರೂ ಎಲ್ಲಿಗೆ ? ಸವತಿಯರಿಬ್ಬರೂ ಕಾಲಿನಲ್ಲಿ ಹಾಕಿಕೊಳ್ಳುವುದನ್ನು ಕೈಗೆ ತೆಗೆದುಕೊಂಡು ಜಗಳವಾಡಲು ಪ್ರಾರಂಭಿಸಿದರೆ ಏನು ಮಾಡಬೇಕು ? ಇರುವ ಪುಟ್ಟಸಂಸಾರವನ್ನು ವಿನಾಕಾರಣವಾಗಿ ವೃದ್ಧಿಸಿಕೊಳ್ಳುವುದು ಆರ್ಥಿಕ ದೃಷ್ಟಿಯಿಂದ ಹಿತವೇ ? ಸಮಾಜದಲ್ಲಿ ತನ್ನ ಸ್ಥಾನಮಾನಗಳು ಇದೇರೀತಿಯಾಗಿ ಮುಂದು

ಇರುವುವೇ ? ಹೀಗೆ ಹತ್ತಾರು ಸಮಸ್ಯೆಗಳು ಅವನನ್ನು ಬಾಧಿಸತೊಡಗಿದವು. ಆದರೂ ತನ್ನ ಸದ್ವಂಶ (?) ಉದ್ಧಾರವಾಗಿಯೇ ತೀರಬೇಕೆಂಬ ಹಟದಿಂದ ಕನ್ಯಾಶೋಧನೆಯಲ್ಲಿ ತೊಡಗಿದ

ಯಾರನ್ನಾದರೂ ತಾಗಬಹುದು ಬೃಹದ್ ಭೈರಗಿಗಳೆಂದು ಖ್ಯಾತಿ ಪಡೆದಿರುವ ಕದೀಮರನ್ನೂ ತಾಗಬಹುದು. ಆದರೆ ಹರಯ ಮೀರಿದವರು ಕನ್ಯಾನ್ವೇಷಣದಲ್ಲಿದ್ದಾಗ ಅವರನ್ನು ತಾಗುವುದು ದುರಂತಕ್ಕೆ ಸಮನಾದುದು. ಕುಶಲಸಮಾಚಾರ ವಿಚಾರಿಸಿದ ತಕ್ಷಣವೇ ತಾವು ಮದುವೆಯಾಗಲು ಇಚ್ಛೆ ಪಟ್ಟಿರುವ ವಿಷಯವನ್ನು ಮಂಡಿಸುತ್ತಾರೆ ಅದರ ಸಮರ್ಥನೆಗಾಗಿ ತಮ್ಮ ಸುಳ್ಳು ವಯಸ್ಸು, ತಮ್ಮ ಆಸ್ತಿಪಾಸ್ತಿಗಳ ವರ್ಣನೆ, ನೂತನ ವಧುವಿಗೆ ತಾವು ಹಾಕುವ ವಸ್ತ್ರ ಒಡವೆಗಳು, ಆ ಹುಡುಗಿ ತಮ್ಮ ಮನೆಯಲ್ಲಿ ಪಡೆಯ ಬಹುದಾದ ಸುಖಸೌಕರ್ಯಗಳನ್ನು ನಿಮ್ಮೆದುರು ಬಾಯಿಪಾಠ ಒಪ್ಪಿಸುತ್ತಾರೆ. ನಿಮ್ಮ ಪ್ರಭಾವ ಬಳಸಿ ಎಲ್ಲಿಯಾದರೂ ಒಂದು ಅಭ್ಯಗ್ರ ಕನ್ಯೆ ಇದ್ದರೆ ತಮಗೆ ಕೊಡಿಸಬೇಕೆಂದು ಹೇಳಿಯೇ ಬಿಡುತ್ತಾರೆ.

ಇಂಥಾ 'ವರ' ಗಳಿಗಾಗಿ ಕೆಲವರು ಕಾದಿರುತ್ತಾರೆ ಯಾವುದಕ್ಕೂ ಹಣ ಬಿಚ್ಚದಿದ್ದವರು ಕನ್ಯೆ ಕೊಡಿಸುತ್ತೇವೆಂದು ಹೇಳಿದವರಿಗೆ ಮುಕ್ತಹಸ್ತ ದಿಂದ ಹಣ ಕೊಡುತ್ತಾರೆ "ಕಾರವಾರದಲ್ಲಿ, ಮಂಗಳೂರಿನಲ್ಲಿ ಬೇಕಾ ದಷ್ಟು ಕನ್ಯೆಗಳಿವೆ. ಒಂದಿನ್ನೂರು ರೂಪಾಯಿ ಕೊಟ್ಟುಬಿಡಿ, ನಿಮ್ಮ ಬಾಯಲ್ಲಿ ನೀರೂರುವಂಥ ಕನ್ಯೆ ತರುತ್ತೇನೆ" ಎಂತ ಯಾವನಾದರೂ ಹೇಳಿದರೆ ಸರಿ ಆಗಲೇ ಅವನ ಕೈಗೆ ಬಿತ್ತು ಇನ್ನೂರು ರೂಪಾಯಿ. ಆಚಾ ರಿಯ ದುಡ್ಡಿನಿಂದ ಎಷ್ಟೋ ಜನರು ಅನೇಕ ಊರುಗಳನ್ನು ನೋಡಿದ್ದಾ ಯಿತು. ಆಚಾರಿಯು ಎಷ್ಟೋ ಕನ್ಯೆಗಳನ್ನು ನೋಡಿದ. ಇವನು ಒಪ್ಪಿ ದರೂ ಅವರು ಒಪ್ಪಲಿಲ್ಲ. ಒಂದು ತುಂಟ ಹುಡುಗಿ ಆಚಾರಿಯನ್ನು ನೋಡಿ "ಅಜ್ಜ, ನೀನೇನೆ ನನ್ನ ಮದುವೆಯಾಗುವುದಕ್ಕೆ ಬಂದವನು, ಮೂರ್‍ರು ಕತ್ತೆ ವಯಸ್ಸಾಗಿರುವ ನಿನಗೆ ನಾಚಿಕೆ ಬರುವುದಿಲ್ಲವೇ ?" ಎಂದು ಕೇಳಿಯೇ ಬಿಟ್ಟಳು.

ಆದರೂ ವೆಂಕೋಬಾಚಾರಿ ಹತಾಶನಾಗಲಿಲ್ಲ. ಯಾವುದಾದರೂ ಒಂದು ಪರದೇಶಿ ಕನ್ಯೆ ತನಗೆ ದಕ್ಕೀತೆಂದು ಆಶೆಯನ್ನಿಟ್ಟುಕೊಂಡಿದ್ದ. ತನ

ಗಿಂತಲೂ ವಯಸ್ಸಾದವರಿಗೆ ಮದುವೆಯಾಗಿ ಮಕ್ಕಳಾದುದನ್ನೂ, ಆ ಮನೆತನಗಳು ಉದ್ಧಾರವಾದದ್ದನ್ನೂ ಹೇಳುತ್ತಿದ್ದ. ತನಗೆ ಕಡಮೆ ವಯಸ್ಸಾಗಿದೆಯೆಂದು ತೋರಿಸಲು ಬೇರೆಬೇರೆ ಜಾತಕದ ನಕಲುಗಳನ್ನು ಸಹ ಬರೆದಿಟ್ಟಿದ್ದ.

ಒಂದು ಸಾರಿ ಮೂರಿಪ್ಪತ್ತು ವಯಸ್ಸು ದಾಟಿದ ಪುಣ್ಯಾತ್ಮನೊಬ್ಬ ನಾಲ್ಕನೆಯ ಮದುವೆ ಮಾಡಿಕೊಂಡ. ಇವನ ಸ್ನೇಹಿತರೊಬ್ಬರು ಇವನನ್ನು ಕೇಳಿದರು "ಅಯ್ಯಾ, ನಿಮಗೆ ಷಷ್ಠ್ಯಾಬ್ದಿ ಪೂರ್ತಿಯಾಗಿದೆ ಈ ವಯಸ್ಸಿನಲ್ಲಿ ನಾಲ್ಕನೆಯ ಮದುವೆ ಮಾಡಿಕೊಂಡಿದ್ದೀರಲ್ಲ" ಅಂತ ಕೇಳಿದ್ದಕ್ಕೆ, "ಅಯ್ಯಾ, ನಾನು ನಾಲ್ಕನೆ ಮದುವೆ ಮಾಡಿಕೊಂಡಿದ್ದರಲ್ಲಿ ಒಂದು ರಹಸ್ಯ ಅಡಗಿದೆ. ನನಗೆ ಮೂರು ಜನ ಹೆಂಡಂದಿರು ಕೈಕೊಟ್ಟರು. ನಾನು ಒಬ್ಬಳಿಗಾದರೂ ಕೈಕೊಡದಿದ್ದರೆ ಹುಟ್ಟಿದ್ದಕ್ಕೇನು ಸಾರ್ಥಕ ?"

ವೆಂಕೂಬಾಯಿಯ ಅಸಹಾಯಕ ಪರಿಸ್ಥಿತಿಯನ್ನರಿತೋ, ಗಣಪತಿಯನ್ನು ಸೆರೆ ಹಾಕಿದ್ದಕ್ಕಾಗಿಯೋ, ಹಲವು ಚಿಲ್ಲರೆ ದೇವರುಗಳಿಗೆ ಹರಕೆ ಹೊತ್ತಿದ್ದಕ್ಕಾಗಿಯೋ, ದೇವರು ಕಣ್ತೆರೆದ. ವೆಂಕೂಬಾಯಿಯವರು ಗರ್ಭವತಿಯಾದರು. ಶಿಕಾರಿಪುರದ ಹನುಮಂತರಾಯನಿಗೆ ಹರಕೆ ಹೊತ್ತು ಮಗು ಹುಟ್ಟಿದರೆ ಆ ದೇವರ ಹೆಸರಿಡುವುದಾಗಿ ಬೇಡಿಕೊಂಡಿದ್ದರು. ಈಗ ಗಂಡಹೆಂಡತಿಯರಿಗೆ ಒಂದು ದೊಡ್ಡ ಸಮಸ್ಯೆ ಉದ್ಭವಿಸಿತು. ಯಾವ ದೇವರಿಗೆ ಹರಕೆ ಹೊತ್ತಿದ್ದರಿಂದ ಅಥವಾ ಯಾವ ಪುಣ್ಯಕ್ಷೇತ್ರಗಳಿಗೆ ಭೇಟಿ ಕೊಟ್ಟಿದ್ದರಿಂದ ಆಕೆ ಗರ್ಭವತಿಯಾಗಿದ್ದಳೆಂಬುದನ್ನು ಖಚಿತವಾಗಿ ನಿರ್ಧರಿಸಲು ಸಾಧ್ಯವಾಗಲಿಲ್ಲ. ಅಲ್ಲದೆ "ಕೂಸು ಹುಟ್ಟುವುದಕ್ಕೆ ಮೊದಲೇ ಕುಲಾವಿ ಹೊಲಿಸಿದರು" ಎಂಬಂತ ಮಗು ಹುಟ್ಟುವುದಕ್ಕೆ ಮುಂಚೆ ಹೆಸರಿಗಾಗಿ ಜಗಳವಾಡುವುದೇಕೆ ? ಅಲ್ಲದೆ ಹುಟ್ಟುವ ಮಗು ಗಂಡೋ ಹೆಣ್ಣೋ ಹೇಳುವವರಾರು ?

ವೆಂಕೋಬಾಚಾರಿ ಈಗ ಪುನಃ ಲಗ್ನವಾಗುವ ಹವ್ಯಾಸ ತೊರೆದ. ಹೆಂಡತಿಯನ್ನು ನಿರ್ಲಕ್ಷಿಸುತ್ತಿದ್ದವನು ಈಚೆಗೆ ಆಕೆಯ ಬಗ್ಗೆ ಹೆಚ್ಚು ಗಮನ ಕೊಡುತ್ತಿದ್ದಾನೆ. ಮನೆ ಕೆಲಸಗಳನ್ನು ಮಾಡಲು ತಿಂಗಳಿಗೆ ಎರಡು ರೂಪಾಯಿಗಳ ಮೇರೆಗೆ ಒಬ್ಬ ವಿಧವೆಯನ್ನು ಗೊತ್ತುಮಾಡಿದ್ದಾನೆ. ಆಗಾಗ್ಗೆ ಒಂದಾಣೆ, ಎರಡಾಣೆ ಕೊಟ್ಟು ಹೂವು ಹಣ್ಣುಗಳನ್ನು ತರುವುದೂ ಉಂಟು.

ಒಂದೊಂದು ಬಾರಿ ಆಕೆಯನ್ನು ಹೀನವಾಗಿ ನಡೆಸಿಕೊಂಡಿದ್ದು ಸರಿಯೇ ಎಂದು ಆಲೋಚಿಸುವನು. ಸರಿ ಅಂತ ಒಂದು ಕಡೆ ಅಂತರಾತ್ಮ ಚೀರು ದನಿಯಲ್ಲಿ ಮೂಲೆಯಲ್ಲಿ ಕಿರಿಚುತ್ತಿದ್ದರೂ ತನ್ನ ಅಂತಸ್ತಿಗೆ ಸರಿಯಾಗಿ ನಡೆಸಿ ಕೊಂಡಿದ್ದೇನೆಂದು ಸಮಾಧಾನಪಟ್ಟುಕೊಳ್ಳುತ್ತಾನೆ. ತನಗಿರುವ ಎಂಟು ಹತ್ತು ಸಾವಿರ ರೂಪಾಯಿಗಳು ಏನು ಮಹಾ ಅದನ್ನು ಈಗ ಮನಸ್ವಿ ಯಾಗಿ ಖರ್ಚು ಮಾಡಿಬಿಟ್ಟರೆ ನನ್ನ ಮತ್ತು ನನ್ನ ಹೆಂಡತಿಯ ವೃದ್ಧಾಪ್ಯದಲ್ಲಿ ಯಾರು ಆಸರೆ ಕೊಡುತ್ತಾರೆ ಬಾಯಿಂದ ಸಾವಿರ ಮಾತುಗಳನ್ನು ಆಡಬಹುದು, ಹೊತ್ತು ಬಂದಾಗ ಒಂದು ಬಿಡಿ ಕಾಸನ್ನೂ ಸಹ ಜನ ಬಿಚ್ಚುವುದಿಲ್ಲ.

ವೆಂಕೂಬಾಯಿಯು ಗಂಡುಮಗುವನ್ನು ಹೆತ್ತರು. ಆಚಾರಿಯ ಸಂತೋ ಷಕ್ಕೆ ಪಾರವೇ ಇಲ್ಲ. ತಾನೇ ಮನೆಮನೆಗೂ ಹೋಗಿ ಈ ಸಂತೋಷ ವಾರ್ತೆಯನ್ನು ಬೀರಿದ. ಬೀದಿಯಲ್ಲಿ ಅತ್ತ ಮುಖ ತಿರುಗಿಸಿ ಹೋಗುತ್ತಿ ದ್ದವರನ್ನು ಕೂಗಿ, ಕರೆದು ತನಗೆ ಗಂಡು ಮಗು ಆದ ವಿಷಯವನ್ನು ತಿಳಿಸು ವನು. ಅವನ ಸಡಗರನನ್ನು ನೋಡಿದರೆ ನಗೆ ಬರುವಂತಿತ್ತು. ಅಕ್ಕಪಕ್ಕದ ಮನೆಯವರಿಗೆ ನಿದ್ರೆ ಬಾರದಂತೆ ಬೆಳಗಿನ ಜಾವ ಎದ್ದು ಪಾರಾಯಣಕ್ಕೆ ಆರಂಭಿಸುವನು. ಗಂಟೆಗಟ್ಟಲೆ ದೇವರ ಪೂಜೆ.

ಮಗುವಿನ ನಾಮಕರಣದ ವಿಚಾರ ಬಂದಾಗ ಗಂಡಹೆಂಡತಿಯರಿಗೆ ಒಂದು ದೊಡ್ಡ ಯುದ್ಧವೇ ಆಯಿತು. ತಾವು ತಿರುಪತಿಯಾತ್ರೆ ಮಾಡಿದ್ದ ರಿಂದ ಈ ಮಗು ಹುಟ್ಟಿತೆಂದೂ ಇದಕ್ಕೆ ಶ್ರೀನಿವಾಸ, ವೆಂಕಟೇಶ ಅಥವಾ ತಿಮ್ಮಪ್ಪಾ ಎಂಬುದಾಗಿ ಹೆಸರಿಡಬೇಕೆಂದು ವೆಂಕೋಬಾಚಾರಿ ಮೊಂಡು ಹಿಡಿದ. ಶಿಕಾರಿಪುರದ ಹನುಮಂತರಾಯನಿಗೆ ತಾವು ಬೇಡಿಕೊಂಡಿರು ವುದರಿಂದ ತಮಗೆ ಮಗು ಆಯಿತೆಂತಲೂ, ಮಗ ಆದರೆ ಆ ದೇವರ ಹೆಸರನ್ನೇ ಇಡುವುದಾಗಿ ತಾವು ಬೇಡಿಕೊಂಡಿರುವುದಾಗಿಯೂ ವೆಂಕೂಬಾಯಿ ಹೇಳಿದರು. ಅಲ್ಲದೆ ಶಿಕಾರಿಪುರದ ಹನುಮಂತರಾಯನಿಗೆ ಹುಚ್ಚರಾಯ ಎಂದು ಹೆಸರು. ಶಿಕಾರಿಪುರದ ಭ್ರಾಂತೇಶ, ಕಾಂತೇನಹಳ್ಳಿ ಕಾಂತೇಶ ಮತ್ತು ಕದರ ಮಂಡಗಿ ಕಾಂತೇಶ ಎಂಬುದಾಗಿ ಮೂರು ವಿಧವಾದ ಹನುಮಂತನ ದೇವಾ ಲಯಗಳಿವೆ. ಶಿಕಾರಿಪುರದಲ್ಲಿರುವ ಹನುಮಂತನು ಹುಚ್ಚನಂತಿದ್ದಾನೆಂದೂ,

ಕಾಂತೇನಹಳ್ಳಿಯ ಕಾಂತೇಶನು ತೇಜಸ್ವಿಯಾಗಿದ್ದಾನೆಂದೂ, ಸಾತೇನ ಹಳ್ಳಿ ಶಾಂತೇಶನು ಸಾತ್ವಿಕವಾಗಿದ್ದಾನೆಂದೂ ಪ್ರತೀತಿಯಿದೆ. ಸಾಮಾನ್ಯ ವಾಗಿ ಶಿಕಾರಿಪುರದಲ್ಲಿ ಮಕ್ಕಳಿಗೆ ಹುಚ್ಚ, ಹುಚ್ಚಿ ಎಂಬ ಹೆಸರಿಟ್ಟಿರು ತ್ತಾರೆ. ಯಾರಾದರೂ ನಾಲ್ಕು ಜನರ ಗುಂಪೊಂದು ಹೋಗುತ್ತಿರು ವಾಗ 'ಹುಚ್ಚ' ಎಂತ ಕೂಗಿದರೆ ಮೂರು ಜನ ತಿರುಗಿ ನೋಡುತ್ತಾರೆ.

ಹೆಸರಿನಲ್ಲೇನಿದೆ? ಅಂತ ಷೇಕ್ಸ್‌ಪಿಯರ್ ಮಹಾಕವಿ ಒಂದೆಡೆ ಹೇಳಿದ್ದಾನೆ. ಗುಲಾಬಿ ಹೂವನ್ನು ಯಾವ ಹೆಸರಿನಿಂದ ಕರೆದರೂ ಅದು ಗುಲಾಬಿಯ ಪರಿಮಳವನ್ನೇ ಬೀರುತ್ತದೆ ಅಂತಲೂ ಹೇಳಿದ್ದಾನೆ. ನಿಜ, ಗುಲಾಬಿಯನ್ನು ನಾವು ಯಾವ ಹೆಸರಿನಿಂದ ಕರೆದರೂ ಪ್ರಮಾದವಾಗುವು ದಿಲ್ಲ. ಆದರೆ ಮನುಷ್ಯ ಸರಿಯಾದ ಒಂದು ಹೆಸರಿಲ್ಲದಿದ್ದರೆ ಸಮಾಜದಲ್ಲಿ ತಲೆಯೆತ್ತಿಕೊಂಡು ಓಡಾಡುವುದು ಹೇಗೆ? ಮೂರು ನಾಲ್ಕು ಮಕ್ಕಳು ಸತ್ತು ಅನಂತರ ಹುಟ್ಟಿದ ಮಕ್ಕಳಿಗೆ ಗುಂಡ, ಕಲ್ಲು, ತಿರುಕ, ತಿಪ್ಪ (ಪ್ಪೆ), ಕಾಡು, ಅಡವಿ, ಎಂಬ ಹೆಸರಿಟ್ಟಿರುತ್ತಾರೆ. ಇದರ ಅಂತರಾರ್ಥ ಏನೆಂದರೆ, ಈ ಮಗು ಕಲ್ಲುಗುಂಡುಗಳಂತೆ ಗಟ್ಟಿಯಾಗಿರಲಿ ಅಂತ. ಕಾಡು, ಅಡವಿ, ತಿಪ್ಪೆ ಇವು ದಿನಗಳೆದಂತೆ ವೃದ್ಧಿಯಾಗುತ್ತವೆ. ಅಂತೆಯೇ ಈ ಮಕ್ಕಳಿಗೆ ಈ ಹೆಸರುಗಳನ್ನಿಡುತ್ತಾರೆ. ಹಿರಿಯರ ಉದ್ದೇಶವೇನೋ ಚೆನ್ನಾಗಿದೆ. ಆದರೆ ಈ ಹೆಸರುಗಳನ್ನಿಟ್ಟುಕೊಂಡ ಮಕ್ಕಳು ದೊಡ್ಡವರಾದಮೇಲೆ ಬಹಳ ಅಪಹಾಸ್ಯವನ್ನನುಭವಿಸಬೇಕಾಗುತ್ತದೆ. ಶಾಲೆಯಲ್ಲಿ, ಸ್ನೇಹಿತರಲ್ಲಿ, ಸಮಾ ಜದಲ್ಲಿ ಈ ಹೆಸರುಗಳ ಬಗ್ಗೆ ಬೇಕಾದಷ್ಟು ಹಿತವಲ್ಲದ ಟೀಕೆ, ಟಿಪ್ಪಣಿಗಳು ನಡೆಯುತ್ತಿರುತ್ತವೆ.

ಹುಚ್ಚ ಎಂಬ ಹೆಸರು ವೆಂಕೋಬಾಚಾರಿಗೆ ಅಷ್ಟಾಗಿ ಹಿಡಿಸಲಿಲ್ಲ. ಗಂಡ ಹೆಂಡತಿಯರು ಒಂದು ರಾಜೀ ನ್ಯಾಯಕ್ಕೆ ಒಪ್ಪಿದರು. ಸಕಲ ಜೀವ ಕೋಟಿಗಳ ಪ್ರಾಣರಕ್ಷಣೆ ಹೊತ್ತಿರುವ ಮುಖ್ಯಪ್ರಾಣನ ಹೆಸರನ್ನೇ ಮಗುವಿಗೆ ಇಡಬೇಕೆಂದು ನಿರ್ಧರಿಸಿದರು. ಹುಚ್ಚರಾಯ, ಪ್ರಾಣೇಶ ಒಂದೇ ಹೆಸರಲ್ಲವೇ. ಮಗುವಿಗೆ ಪ್ರಾಣೇಶ ಎಂದು ಹೆಸರಿಟ್ಟದ್ದಾಯಿತು.

ಪ್ರಾಣೇಶ ಎಂಬ ಹೆಸರು ಬಹಳ ಚಮತ್ಕಾರವಾಗಿದೆ. ನನ್ನ ಸ್ನೇಹಿತ ನೊಬ್ಬನಿದ್ದಾನೆ ಪ್ರಾಣೇಶ. ಅವನೊಂದು ಸಾರಿ ಯಾರೋ ತನ್ನ ಸ್ನೇಹಿತ

ನನ್ನು ನೋಡಲು ಹೋದ. ಆ ಸ್ನೇಹಿತ ಮನೆಯಲ್ಲಿರಲಿಲ್ಲ. ಆತನ ಹೆಂಡತಿ ಬಾಗಿಲು ಸಂದಿಯಿಂದ ಕೇಳಿದಳು. "ಅವರು ಮನೆಗೆ ಬಂದಮೇಲೆ ಯಾರು ಬಂದಿದ್ದರು ಅಂತ ಹೇಳಲಿ'' ಆದಕ್ಕೆ ಸ್ನೇಹಿತ "ಪ್ರಾಣೇಶ ಬಂದಿದ್ದಾ ಅಂತ ಹೇಳಿ'' ಎಂತ ಹೇಳಿದ. ಸರಿ, ಆಕೆಯ ಗಂಡ ಮನೆಗೆ ಬಂದಾಗ ಪ್ರಾಣೇಶ ಬಂದ ವಿಚಾರ ಹೇಳಿದಳು. "ನಾನಿರುವಾಗ ಮತ್ತಾವ ನಿನ್ನ ಪ್ರಾಣೇಶ ಬಂದಿದ್ದ?'' ಅಂತ ಹೆಂಡತಿಯೊಂದಿಗೆ ಜಗಳವಾಡಿಯೇ ಬಿಟ್ಟ.

ಮಗು ದೊಡ್ಡದಾದಂತೆ ವೆಂಕೋಬಾಚಾರಿ ಸಾವಿರಾರು ಸ್ವಪ್ನಸೌಧ ಗಳನ್ನು ಕಟ್ಟುವನು. ತನ್ನ ಮಗನು ಇಂಗ್ಲೀಷ್ ವಿದ್ಯೆ ಕಲಿತು ಯಾವು ದಾದರೂ ಒಂದು ಸರ್ಕಾರಿ ಕೆಲಸಕ್ಕೆ ಸೇರಲೆಂದು ಆಶೆಪಡುತ್ತಾನೆ. ತನ್ನ ವೃತ್ತಿಯ ಬಗ್ಗೆ ತನಗೇ ಒಂದು ತರಹೆ ಜಿಹಾಸೆ ಹುಟ್ಟಿತ್ತು. ಯಾವುದಾ ದರೂ ಸರ್ಕಾರಿ ಚಾಕರಿಯು ತನ್ನ ವೃತ್ತಿಗಿಂತ ಸಹಸ್ರ ಪಾಲು ಮೇಲೆಂದು ತಿಳಿದುಕೊಂಡಿದ್ದ. ಚಾಕರಿ ಸಿಕ್ಕರೆ ಹೆಚ್ಚು ಹಣ ಸಂಪಾದಿಸಬಹುದೆಂಬ ಭ್ರಮೆಯೂ ಅವನಿಗಿತ್ತು.

ಇಂಥ ಒಂದು ತಪ್ಪು ಭಾವನೆಗಾಗಿ ನಾವು ವೆಂಕೋಬಾಚಾರಿಯೊಬ್ಬ ನನ್ನೇ ದೂಷಿಸಲು ಬರುವುದಿಲ್ಲ. ಮನುಷ್ಯ ತಾನು ಕೈಕೊಂಡಿರುವ ಒಂದು ಉದ್ಯಮಕ್ಕಿಂತ ಇನ್ನೊಬ್ಬರು ಕೈಕೊಂಡಿರುವ ಇನ್ನೊಂದು ಉದ್ಯಮವು ಶ್ರೇಷ್ಠವೆಂದೂ, ಲಾಭದಾಯಕವೆಂದೂ, ಹೆಚ್ಚು ಮನ್ನಣೆಗೆ ಅರ್ಹವಾದ ದ್ದೆಂದೂ ತಿಳಿದಿರುತ್ತಾನೆ. ಗಾಯಕ, ನರ್ತಕನಾಗಲು ಪ್ರಯತ್ನಿಸುತ್ತಾನೆ- ಚಿತ್ರಗಾರ, ಶಿಲ್ಪಿಯಾಗಲು ಪ್ರಯತ್ನಿಸುತ್ತಾನೆ. ಬಾಯಿ ಹಾಡುಗಾರಿಕೆಯಲ್ಲಿ ಪ್ರವೀಣತೆ ಪಡೆದಿರುವವರು ವಾದ್ಯ ಬಾರಿಸಲು ಆರಂಭಿಸುತ್ತಾರೆ. ಹೀಗೆ ಬೇರೆ ಬೇರೆ ವೃತ್ತಿಯವರು ತಮ್ಮ ವೃತ್ತಿಗಿಂತ ಇನ್ನಾವುದೋ ಒಂದು ಶ್ರೇಷ್ಠ ವೆಂದು ನಂಬಿರುತ್ತಾರೆ. ಇದೊಂದು ನೈಚ್ಚಮನೋವೃತ್ತಿಯ ಲಕ್ಷಣ ಅಷ್ಟೆ.

ಪ್ರಾಣೇಶನಿಗೆ ಆರು ವರ್ಷ ತುಂಬುತ್ತಲೇ ಶಾಲೆಗೆ ಹಾಕಿದರು. ಮಗು ಅಂತಹ ಚೂಟಿಯದಾಗಿರಲಿಲ್ಲ. ಮನೆಯಲ್ಲಿ ಗಲಾಟೆ ಮಾಡುತ್ತಿದ್ದನೆಂದು ಶಾಲೆಗೆ ಹಾಕಿದ್ದರು. ಶಾಲೆಯಲ್ಲಿ ಗಲಾಟೆ ಮಾಡಿದಕೂಡಲೇ ಮನೆಗೆ ಓಡಿಬರುತ್ತಿದ್ದ. ಅಂತೂ ಅವನು ಅಕ್ಷರ ಕಲಿಯಲು ಎರಡು ಮೂರು ವರ್ಷ ಗಳು ಹಿಡಿದವು. ಪ್ರತಿ ತರಗತಿಯಲ್ಲೂ ಒಂದೆರಡು ಬಾರಿ ದಂಡಯಾತ್ರೆ

ಗಳನ್ನು ಮಾಡಿ ಅವನು ಲೋವರ್ ಸೆಕಂಡರಿ ತರಗತಿಗೆ ಬರುವ ಹೊತ್ತಿಗೆ ಅವನಿಗೆ ಹದಿನೆಂಟು ವರ್ಷ ದಾಟಿತ್ತು. ಐದು ರೂಪಾಯಿಯ ಪರೀಕ್ಷೆ ಆದರೆ ಸಾಕೆಂದು ವೆಂಕೋಬಾಚಾರಿ ವಿಶ್ವಪ್ರಯತ್ನಪಟ್ಟರು. ಆದರೆ ಪ್ರಾಣೇಶ ಪ್ರಯತ್ನಿಸದಿದ್ದರೆ ಅವನು ಪರೀಕ್ಷೆಯಲ್ಲಿ ತೇರ್ಗಡೆಯಾಗುವುದಾದರೂ ಹೇಗೆ? ಸರಿ ಒಂದು ಸಾರಿ, ಎರಡು ಸಾರಿ ಪ್ರಾಣೇಶ ಅಲ್ಲಿಯೇ ಕೊಳೆತ. ಮುಟ್ಟಿದ್ದಕ್ಕೆ ಮೂರು ಸಾರಿ ಅನ್ನುವಂತೆ ಮೂರನೆ ಸಾರಿ ಪರೀಕ್ಷೆಯಲ್ಲಿ ಉತ್ತೀರ್ಣನಾದ. ಅಂದೇ ಶಾಲೆಗೆ ಮತ್ತು ಸರಸ್ವತಿಗೆ ಶರಣು ಹೊಡೆದ. ಆಧುನಿಕ ಕಾಲದಲ್ಲಿ ಪವಾಡಗಳಲ್ಲಿ ನಂಬಿಕೆ ಇಲ್ಲವೆಂದು ವಾದಿಸುವವರಿಗೆ ತಕ್ಕ ಉತ್ತರವೆಂದರೆ ಪ್ರಾಣೇಶ ಲೋವರ್ ಸೆಕಂಡರಿ ಪ್ಯಾಸ್ ಆದುದೇ ಆಗಿದೆ.

ಪ್ರಾಣೇಶ ಅಚ್ಚ ವೈದೀಕ ಗೊಡ್ಡು. ತಂದೆಯ ಚಾತುರ್ಯವಾಗಲೀ ದುರಾಶೆಯಾಗಲೀ ಅವನಲ್ಲಿಲ್ಲ. ತಾಯಿಯಂತೆ ಅವನು ಸಾಧು ಹಸುವಿನಂತಿದ್ದಾನೆ. ಹೊತ್ತಿಗೆ ಸರಿಯಾಗಿ ಎರಡು ಊಟ ಬಿದ್ದರೆ ಜಗತ್ತೇ ಪ್ರಳಯವಾದರೂ ಅವನಿಗೆ ಯೋಚನೆ ಇಲ್ಲ. ಎತ್ತರವಾದ ಮೈ ಕೈ ತುಂಬಿದ ಬೀಸು ಆಳು. ಪಾದರಸದಂತೆ ಹರಿಯುವ ಕಣ್ಣುಗಳು, ತಂದೆಯ ಮುಖದಂತೆ ಗುಂಡುಮುಖ, ಕಂಡೂಕಾಣದಂತಿರುವ ಹರಕು ಮುರಕು ಮೀಸೆ ಗಡ್ಡಗಳು ನಸುನಾಚಿಕೆಯಿಂದ ಹೆಣ್ಣು ತನ್ನ ನಲ್ಲನನ್ನು ನೋಡುವಂತೆ ಈಗಲೀಗ ಇಣಕಿ ಹಾಕುತ್ತಿವೆ. ಒಟ್ಟಿನಲ್ಲಿ ಪ್ರಾಣೇಶ ನೋಡಲು ಚಂದವಾಗಿರುವ ಮುತ್ತುಗದ ಹೂ-ನಿರ್ಗಂಧ ಕುಸುಮ.

ಪ್ರಾಣೇಶ ವೈದೀಕ ವೃತ್ತಿಯನ್ನು ಕಲಿಯಲಿಲ್ಲ. ಶಾಲೆಯ ವಿದ್ಯೆ ಹಿಡಿಯಲಿಲ್ಲ. ತನ್ನ ಮಗ ಇಂಗ್ಲೀಷ್ ಕಲಿತು ದೊಡ್ಡ ನೌಕರಿಗೆ ಸೇರಿಯಾನೆಂಬ ವೆಂಕೋಬಾಚಾರಿಯ ಕನಸು ಬಯಲಾಗುತ್ತ ಬಂದಿತು. ಅವನಿಗೆ ವೈದಿಕ ವಿದ್ಯೆ ಹೇಳಿಕೊಡಬೇಕೆಂದು ಪ್ರಯತ್ನಿಸಿದರು. ಮಂತ್ರಗಳನ್ನು ಗಿಳಿಪಾಠ ಮಾಡಿಸಲು ಅವರು ಹೆಣಗಿದ ಶ್ರಮ ನಿರರ್ಥಕವಾಯಿತು. ಅಂಗಡಿ ಹಚ್ಚಿ ಕೊಟ್ಟರೆ ಅದನ್ನು ಸಹ ಸರಿಯಾಗಿ ರೂಢಿಸಲಾರನೆಂಬುದು ಅವರಿಗೆ ಗೊತ್ತಿತ್ತು. ಮಗನನ್ನು ಹೈಸ್ಕೂಲಿಗೆ ಕಳಿಸಬೇಕೆಂದು ಆಲೋಚಿಸಿದರು. ತಾನು ಮುಂದೆ ಓದುವುದಿಲ್ಲವೆಂದು ಮಗ ಮುಷ್ಕರ ಹೂಡಿದ. ತನಗೆ ವಿದ್ಯೆ ಹತ್ತುವು

ದಿಲ್ಲವೆಂದು ಯಾವ ಬಿಗುಮಾನವೂ ಇಲ್ಲದೆ ಘಂಟಾಘೋಷವಾಗಿ ಹೇಳಿದ

ಇಂಥ ಮಗ ತನ್ನ ಆಸ್ತಿಯನ್ನು ರೂಢಿಸಿಕೊಂಡು ಹೋಗಬಲ್ಲನೆಂಬ ಸಂಶಯ ವೆಂಕೋಬಾಚಾರಿಗೆ ಬಾಧಿಸಹತ್ತಿತು. ಆದರೂ ಅವನಿಗೆ ಒಂದು ಕೆಲಸ ಸಂಪಾದಿಸಲು ಪ್ರಯತ್ನಿಸತೊಡಗಿದರು. ಪ್ರಾಣೇಶ ಪ್ರೈಮರಿ ಸ್ಕೂಲು ಮೇಷ್ಟರ ಕೆಲಸ ಒಂದು ಬಿಟ್ಟು ಬೇರಾವ ಕೆಲಸವನ್ನೂ ಮಾಡ ಲಾರನೆಂದು ತಿಳಿದು ತಮಗೆ ಪರಿಚಿತರಾದ ರೇಂಜ್ ಇನ್‌ಸ್ಪೆಕ್ಟರ್‌ರವರಿಗೆ ಬೆನ್ನು ಹತ್ತಿದರು ಅವರು ಹತ್ತಿರವೇ ಹಳ್ಳಿಯೊಂದರಲ್ಲಿ ಪ್ರಾಣೇಶನಿಗೆ ಟೆಂಪೊರೆರಿ ಕೆಲಸ ಕೊಡಿಸಿದರು. ಮತ್ತು ಸೆಂಟ್ರಲ್ ರಿಕ್ರೂಟ್‌ಮೆಂಟ್ ಬೋರ್ಡಿಗೆ ಅರ್ಜಿ ಹಾಕಲು ಹೇಳಿದರು. ಸರಿ, ಒಂದು ವರ್ಷ ಕಳೆಯು ವುದರೊಳಗೆ ರಿಕ್ರೂಟ್‌ಮೆಂಟ್ ಬೋರ್ಡಿನಿಂದ ಒಂದು ನಂಬರೂ ಹತ್ತಿತು. ಮತ್ತು ಇದ್ದ ಊರಿಗೇ ವರ್ಗವಾಯಿತು.

ಯುವಕರಿಗೆ ವಿದ್ಯೆ ಇಲ್ಲದಿರಬಹುದು. ಬುದ್ಧಿಯಿಲ್ಲದಿರಬಹುದು, ದುಡಿಯಲು ಶಕ್ತಿಸಾಮರ್ಥ್ಯಗಳಿಲ್ಲದಿರಬಹುದು, ಆದರೂ ಅವರಿಗೆ ಹದಿನೆಂಟು ವರ್ಷಗಳು ತುಂಬಿತೆಂದರೆ ಮದುವೆಯಾಗಬೇಕು. ಸಂಸಾರನಿರ್ವಹಣೆಗೆ ಸಾಕಷ್ಟು ದುಡಿಮೆಯಿಲ್ಲದಿದ್ದರೂ ಮದುವೆಯಾಗುತ್ತದೆ. "ನಾಯಿ ಹಸಿದಿರು ತ್ತದೆ, ಅನ್ನ ಹಳಸಿರುತ್ತದೆ" ಎಂಬಂತೆ ಸಂಬಂಧಗಳೂ ಹಾಗೆಯೇ ಬೆಳೆ ಯುತ್ತವೆ. ಮದುವೆಯಾಗುವ ಕಾಲಕ್ಕೆ ವರನಿಗಿದ್ದ ವರಮಾನ ಹಾಗೇ ಇರುತ್ತದೆಯಾದರೂ ಅವನ ಸಂಸಾರ ಮಾತ್ರ ಹನುಮಂತನ ಬಾಲ ಬೆಳೆದಂತೆ ಬೆಳೆಯುತ್ತಿರುತ್ತದೆ. ಅದರೊಂದಿಗೇ ಬೆಳೆದ ಹೆಣ್ಣುಮಕ್ಕಳು ಅವನ ಮನೆಯಲ್ಲಿದ್ದರೆ ಅವನು ಹಗ್ಗವನ್ನು ತೆಗೆದುಕೊಂಡು ಉದ್ದನೆಯ ಮರವನ್ನು ಹುಡುಕಬೇಕು.

ನ್ಯಾಮತಿಯ ಶ್ರೀನಿವಾಸಾಚಾರಿ ಹೀಗೆ ಹಗ್ಗ ತೆಗೆದುಕೊಂಡು ಹೊರ ಟಿದ್ದ. ಶಾರದಾ ಬಿಲ್ಲಿನಲ್ಲಿ ನಿಷ್ಕರ್ಷಿಸಲ್ಪಟ್ಟ ವಯಸ್ಸಿಗಿಂತಲೂ ನಾಲ್ಕು ವರ್ಷ ಹೆಚ್ಚಾಗಿ ಬೆಳೆದಿರುವ ರಾಧೆಗೆ ವರ ಹುಡುಕಿ ಹುಡುಕಿ ಸಾಕಾಗಿ ಹೋದ. ಶ್ರೀನಿವಾಸಾಚಾರಿಗೆ ದೇವರು ಉಳಿದೆಲ್ಲ ವಿಚಾರಗಳಲ್ಲಿಯೂ ಅನ್ಯಾಯ ಮಾಡಿದ್ದರೂ ಮಕ್ಕಳ ವಿಷಯದಲ್ಲಿ ಅನ್ಯಾಯ ಮಾಡಿರಲಿಲ್ಲ. ಐದು ಹೆಣ್ಣು, ಮೂರು ಗಂಡು. ಅಟ್ಟದ ಮೆಟ್ಟಲಿನ ಹಾಗೆ ಸಾಲಾಗಿವೆ. ದೇವರು ಬಡತನ

ಕೊಟ್ಟು ಮರೆತುಬಿಟ್ಟಿದ್ದ. ಮೂರಂಕಣದ ಬಾಡಿಗೆಯ ಮನೆಯಲ್ಲಿ ಎಂಟು ಜನ ಮಕ್ಕಳು, ಮನೆಯ ಯಜಮಾನ-ಯಜಮಾನಿಯರು ವಾಸಮಾಡ ಬೇಕಾಗಿತ್ತು. ಶ್ರೀನಿವಾಸಾಚಾರಿ ಒಂದು ಕಾಲಕ್ಕೆ ದೊಡ್ಡ ಮನೆತನಕ್ಕೆ ಸೇರಿದವನು. ಅಲ್ಲಿಯೇ ಮೂರು ಹಳ್ಳಿಗಳ ಶಾನುಭೋಗತನ, ಎಂಭತ್ತು ಎಕರೆ ಜಮಿನಿತ್ತು. ಶ್ರೀನಿವಾಸಾಚಾರಿಗೆ ಮೂರು ಜನ ತಮ್ಮಂದಿರು. ಅವರನ್ನು ಓದಿಸಲು, ಅವರಿಗೆ ಮದುವೆ ಮುಂಜಿ ಮುಂತಾದವುಗಳನ್ನು ಮಾಡಲು ಜಮೀನಿನಲ್ಲಿ ಬರುತ್ತಿದ್ದ ಆದಾಯದ ಜೊತೆಗೆ ಜಮೀನೂ ಕರಗುತ್ತ ಬಂದಿತು. ತಮ್ಮಂದಿರು ವಿದ್ಯೆ ಕಲಿತು ಒಳ್ಳೊಳ್ಳೆಯ ಉದ್ಯೋಗ ಗಳನ್ನು ದೊರಕಿಸಿಕೊಂಡರು. ಅವರು ಹೆಂಡಂದಿರು ಮನೆಗೆ ಬಂದಕೂಡಲೇ ಹಿಮ್ಮಡಿ ಕಿತ್ತುಹೋದ ಚಪ್ಪಲಿಯನ್ನು ಬಿಸುಟುವಂತೆ ಶ್ರೀನಿವಾಸಾಚಾರಿ ಯನ್ನು ಅಲ್ಲಿಯೇ ಕೈಬಿಟ್ಟರು. ಶ್ಯಾನುಭೋಗತನದಿಂದ ವರ್ಷಕ್ಕೆ ಇನ್ನೂರು ರೂಪಾಯಿಗಳ ಪೋಟಗೆ ಬರುತ್ತಿತ್ತು. ರಾವಣನ ಹೊಟ್ಟೆಗೆ ಆರು ಕಾಸಿನ ಮಜ್ಜಿಗೆ ಎಂಬಂತೆ ಈ ಬೃಹದ್ ಸಂಸಾರ ತೂಗಿಸಲು ಇನ್ನೂರು ರೂಪಾಯಿ ಗಳು ಯಾವ ಮೂಲೆಗೆ ? ಅಲ್ಲಿ ಇಲ್ಲಿ ಕೈಗಡವಾಯಿತು. ಅಂತೂ ಎರಡು ಸಾವಿರ ರೂಪಾಯಿಗಳ ಸಾಲವಾಗಿತ್ತು. ಇದನ್ನು ತೀರಿಸುವ ನಂಬಿಕೆ ಶ್ರೀನಿವಾಸಾಚಾರಿಗೂ ಇರಲಿಲ್ಲ. ಹಣ ಬರುತ್ತದೆಂಬ ನಂಬಿಕೆ ಸಾಲಗಾರ ರಿಗೂ ಇರಲಿಲ್ಲ. ಆದರೂ ತಿಂಗಳಿಗೊ ಹದಿನೈದು ದಿನಕ್ಕೊ ಒಂದೊಂದು ಸಲ ಬಂದು ಹರಕೆ ಹಾಕಿ ಹೋಗುತ್ತಿದ್ದರು. ಶ್ರೀನಿವಾಸಾಚಾರಿ ಸಾಲಗಾರ ರಿಗೆ ಹಣ ಕೊಡಲು ಹಣ ಇಲ್ಲದೆ ಕೈ ಎತ್ತಬಹುದು. ಆದರೆ ಮಗಳಿಗೆ ಮದುವೆಮಾಡುವುದು ಹೇಗೆ, ವರನ ಕಡೆಯವರ ಬೇಡಿಕೆಗಳನ್ನು ಪೂರೈಸು ವುದಾದರೂ ಹೇಗೆ ?

ನ್ಯಾಮತಿಯ ಅಂಗಡಿರಸ್ತೆಯ ಕೊನೆಯ ಮನೆಯಲ್ಲಿ ಶ್ರೀನಿವಾಸಾಚಾರಿ ಇದ್ದ. ಇದನ್ನು ಮನೆಯೆಂದು ಕರೆಯುವುದು ಸಾಹಸವೇ ಆದೀತು. ಹದಿ ನೈದು ಗಜ ಅಗಲ, ನಲವತ್ತು ಗಜ ಉದ್ದಕ್ಕಿರುವ ಲಂಗೋಟಿಯಂತಹ ಮನೆ. ಎತ್ತಲೂ ಗಾಳಿ ಬೆಳಕುಗಳು ಬರಲು ಅವಕಾಶವೇ ಇಲ್ಲ. ಅಕ್ಕ ಪಕ್ಕದ ಎರಡು ಮಹಡಿ ಮನೆಗಳ ಮಧ್ಯೆ ಈ ಮನೆ ಅಜ್ಜಿಬಜ್ಜಿಯಾಗಿದೆ. ಹೊರ ಬಾಗಿಲು ಮತ್ತು ಹಿತ್ತಲು ಬಾಗಿಲುಗಳು ತೆಗೆದರೆ ಮಾತ್ರ ಗಾಳಿಬೆಳಕುಗಳು

ಹಾಗೂ ಹೀಗೂ ಕಷ್ಟಪಟ್ಟು ಬರಬಹುದು. ಮನೆಯ ಮಧ್ಯಭಾಗದಲ್ಲಿ ಲಾಟೀನು ಹಚ್ಚಬೇಕು. ಮನೆ ಓಡಿಹೋಗುವವರ ಮನೆ ಇದ್ದಹಾಗೆ ಇದೆ. ಎಲ್ಲೆಂದರೆ ಅಲ್ಲಿ ಹರಕು ಚಿಂದಿಗಳು. ಮೊರ ಪರಕೆ ಮುಂತಾದುವು ಮನೆ ತುಂಬ ತೂರಾಡುತ್ತಿದವು. ಮೂಲೆಮೂಲೆಗಳಲ್ಲಿ ಒಂದೆರಡು ಹುಡುಗರು ಹರಕುಚಾಪೆಯಮೇಲೋ, ಗೋಣೀಚೀಲದಮೇಲೋ ಓದುತ್ತ ಬರೆಯುತ್ತ ಕುಳಿತುಕೊಂಡಿದ್ದರು. ಮೇಣದ ಗಮುಟಿನಂಥ ಅಂಗಿಯನ್ನು ಹಾಕಿಕೊಂಡ ಒಂದೂವರೆ ವರ್ಷದ ಮಗುವೊಂದು ಅಂಬೆಗಾಲಿಕ್ಕುತ್ತ ಓದುತ್ತ ಕುಳಿತ ಹುಡುಗರ ಬಳಿ ಬರುವುದು. ಅದು ಬಂತೆಂದರೆ "ರಾಮಾ ಬಂದಾ, ಪುಸ್ತಕಾ ಹರೀತಾನೆ, ಮಸೀಕುಡಿಕೆ ತೆಗೆದಿಡೀ" ಅಂತ ಒಟ್ಟಿಗೆ ಹುಡುಗರೆಲ್ಲ ಕಿರಚುವರು. "ಏ ಗೋಪಿ, ಕುವಿಮ್ಮಾ, ಕೂಸನ್ನು ಕರಕೊಳ್ರೀ" ಎಂತ ಅಡಿಗೆಯ ಒಲೆ ಮುಂದೆ ಕೂತಿದ್ದ ಸೀತಾಬಾಯಿಯವರು ಕಿರಚುವರು.

ಬಾವಿಯಿಂದ ನೀರು ಹೊರುವುದು, ಕೆರೆಯಲ್ಲಿ ಬಟ್ಟೆ ಒಗೆಯುವುದು ಮುಂತಾದ ಮನೆಗೆಲಸಗಳನ್ನು ಹಿರಿಯಮಗಳಾದ ರಾಧೆ ಮಾಡಬೇಕಾಗಿತ್ತು. ರಾಧೆಯೇ ಮನೆಯ ಗಾಣದೆತ್ತು. ಸಂಸಾರಚಕ್ರ ಸುತ್ತುವುದರಲ್ಲಿ ಹುಡುಗಿ ಹಣ್ಣಾಗಿದ್ದಾಳೆ. ವಯಸ್ಸು ಹದಿನಾರು ಮಿಕ್ಕಿದೆ. ವಯಸ್ಸಿಗೆ ತಕ್ಕ ವರ್ಚಸ್ಸಿಲ್ಲ ಕೊಂಚ ಸಾದುಗಪ್ಪಿನ ಹುಡುಗಿ. ಕೋಲುಮುಖ ಸಾಕಷ್ಟು ಪೋಷಣೆ ಇಲ್ಲದೆ ಇನ್ನೂ ಕೋಲಾಗಿತ್ತು.

ರಾಧೆ ಊರಲ್ಲಿಯೇ ಇದ್ದ ಕನ್ನಡ ಶಾಲೆಗೆ ಹೋಗುತ್ತಿದ್ದಳು. ಮನೆಗೆಲಸಗಳ ನಡುವೆ ಓದು ಸಾಗುತ್ತಿರಲಿಲ್ಲ. ಅದು ಒಂದು ಕಾಟಾಚಾರದ ಓದು. ಮನೆಯವರಿಗೆ ಇವಳು ಶಾಲೆಗೆ ಹೋಗುವುದು ಬೇಕಾಗಿರಲಿಲ್ಲ ದುಡಿಯುವ ಒಂದು ಆಳು ಕಡಿಮೆಯಾಗುತ್ತದೆಂದು ಅವರ ಯೋಚನೆ. ನಾಲ್ಕಕ್ಷರ ಇಲ್ಲದಿದ್ದರೆ ಹುಡುಗಿಗೆ ಮದುವೆಯಾಗುವುದು ತೊಂದರೆಯಾದೀತೆಂದು ಮನಸ್ಸಿಲ್ಲದಿದ್ದರೂ ಶಾಲೆಗೆ ಕಳಿಸುತ್ತಿದ್ದರು. ರಾಧೆ ಬಹಳ ಚುರುಕು ಹುಡುಗಿ. ಸೂಕ್ಷ್ಮ ಬುದ್ಧಿಯವಳಾದ್ದರಿಂದ ಅತಿ ಜಾಗ್ರತೆಯಾಗಿ ಪಾಠವನ್ನು ಕಲಿಯುತ್ತಿದ್ದಳು. ಆದರೆ ಮನೆಯ ಕಷ್ಟ ಕಾರ್ಪಣ್ಯಗಳಿಂದಾಗಿ ಶಾಲೆಗೆ ತಪ್ಪಿ ತಪ್ಪಿ ಗೈರುಹಾಜರಾತಿ ಹಾಕುತ್ತಿದ್ದರಿಂದ ಓದು ಎಡವುತ್ತ

ಮುಗ್ಗರಿಸುತ್ತ ಸಾಗಿತ್ತು. ರಾಧೆಯ ಓದಿಗೆ ಅವಳ ಅಜ್ಜಿ (ತಂದೆಯ ತಾಯಿ) ಒಂದೇ ಸಮನಾಗಿ ಬ್ರೇಕ್ ಹಾಕುತ್ತಿದ್ದಳು.

"ನಮ್ಮ ಕಾಲದಲ್ಲಿ ಹೀಗೆಲ್ಲ ಗಂಡಸರ ಹಾಗೆ ನಾವು ಇಸ್ಕೂಲಿಗೆ ಹೋಗುತ್ತಿರಲಿಲ್ಲ. ಇದೇನು ಅನ್ಯಾಯ ಹೆಣ್ಣುಹುಡುಗರು ಗಂಡುಹುಡುಗರ ಹಾಗೆ ಇಸ್ಕೂಲಿಗೆ ಹೋಗೋದು. ಅದಕ್ಕೇ ಪ್ರಪಂಚ ಇಷ್ಟು ಕೆಟ್ಟು ಹೋಗಿರೋದು.''

ರಮಾಬಾಯಿ ಪ್ರಪಂಚ ಕೆಟ್ಟಿರುವುದಕ್ಕೆ ಇಂಥವು ಹಲವಾರು ಕಾರಣಗಳನ್ನು ಮುಂದುಮಾಡುತ್ತಾಳೆ. ಮಾತೆತ್ತಿದರೆ ಅವಳ ಬಾಯಿಂದ ಪ್ರಪಂಚ ಕೆಟ್ಟುಹೋಯಿತು. ಕಾಲ ಕೆಟ್ಟುಹೋಯಿತು ಎಂಬ ಮಾತುಗಳೇ ಬರುತ್ತಿರುತ್ತವೆ. ಸೊಸೆ ಸೀತಾಬಾಯಿಯು ಮಕ್ಕಳನ್ನು ಸುಧಾರಿಸಲಾರದೆ, ಬಡತನದ ಬೇಗೆಯನ್ನು ತಾಳಲಾರದೆ ತನ್ನ ಅದೃಷ್ಟವನ್ನು ತಾನು ಹಳಿದುಕೊಂಡರೆ, ಅದಕ್ಕೆ ಸಹ ರಮಾಬಾಯಿಯು ಕಾಲ ಕೆಟ್ಟುಹೋಯಿತೆನ್ನುವ ಪಲ್ಲವಿಯನ್ನು ಹೇಳುತ್ತಾಳೆ. ಬರಬರುತ್ತ, ಅತ್ತೆ ಸೊಸೆಯ ಮೇಲೆ ತನ್ನ ಅಧಿಕಾರವನ್ನು ಚಲಾಯಿಸಲೇಬೇಕೆಂದು ಹಟತೊಟ್ಟಳು. ಸೊಸೆ ಸ್ವಲ್ಪ ಕಾಲ ಗಂಡನ ಮತ್ತು ಮನೆತನದ ಮರ್ಯಾದೆಗೆ ಹೆದರಿ ಅತ್ತೆಯ ಬಿರುನುಡಿಗಳನ್ನು ತಾಳ್ಮೆಯಿಂದ ಸಹಿಸಿದಳು. ಮೆತ್ತಗಿದ್ದ ಸೊಸೆಯಮೇಲೆ ಅತ್ತೆಯ ಸವಾರಿ ಅತಿ ಬಿಗಿಯಾಗುತ್ತಾ ಬಂದಿತು. ಸೀತಾಬಾಯಿಯ ತಾಳ್ಮೆಯ ಅಣೆಕಟ್ಟು ಒಡೆಯಿತು. ಹೆಡೆ ತುಳಿದ ನಾಗರಹಾವಿನಂತೆ ತಿರುಗಿ ಬಿದ್ದಳು.

ಈ ಅತ್ತೆ ಸೊಸೆಯ ಜಗಳ ನಮ್ಮ ದೇಶದಲ್ಲಿ ಅನೂಚಾನವಾಗಿ ನಡೆದು ಬಂದಿದ್ದು. ಸೊಸೆಯನ್ನು ಮೊದಲು ಮನೆಗೆ ಕರೆತರುವಾಗ ಅವಳನ್ನು ಮಹಾಲಕ್ಷ್ಮಿಯಂತೆ ಆದರಿಸುತ್ತಾಳೆ, ಆದರೆ ದಿನ ಉರುಳಿದಂತೆ ಅತ್ತೆ ಮಹಾಲಕ್ಷ್ಮಿಯನ್ನು ಮಹಾಮಾರಿಯಾಗಿ ಕಾಣುತ್ತಾಳೆ. ಬಡತನದೊಂದಿಗೆ ಬ್ರಹ್ಮೇತಿ ಬೆನ್ನುಹತ್ತಿದಂತೆ ಅತ್ತೆ ಸೊಸೆಯರ ಜಗಳದಿಂದಾಗಿ ಮನೆಯವರಿಗೇ ಅಲ್ಲದೆ ಬೀದಿಯವರಿಗೂ ನೆಮ್ಮದಿ ಇರುತ್ತಿರಲಿಲ್ಲ. ಯಾವ ಶೀಘ್ರಲಿಪಿಗಾರನೂ ಬರೆದುಕೊಳ್ಳದಷ್ಟು ಜಾಗ್ರತೆಯಾಗಿ ಇಬ್ಬರೂ ಬಯ್ಯಲಾರಂಭಿಸುತ್ತಿದ್ದರು. ಮೊದಮೊದಲ ಈ ನಾಟಕ ನೋಡಲು ಜನಜಾತ್ರೆ ಸೇರುತ್ತಿತ್ತು. ಆದರೆ ದಿನವೂ ಆಡಿದ ನಾಟಕವನ್ನೇ ಈ ಇಬ್ಬರು ನಾಯಿಕಾಮಣಿಗಳು ಅಭಿನಯಿಸುತ್ತಿದ್ದುದ

ರಿಂದಲೂ, ಆದರಲ್ಲಿ ಏನೂ ಹೆಚ್ಚುಗಟ್ಟಲೆ ಇಲ್ಲವೆಇದ್ದುದರಿಂದಲೂ ಜನರು ಆಸಕ್ತಿ ವಹಿಸುವುದನ್ನು ಬಿಟ್ಟರು. ಇಬ್ಬರಿಗೂ ಶ್ರೀನಿವಾಸಾಚಾರಿ ಪಂಚಾಯ್ತಿ ದಶಾಯ್ತಿಗಳನ್ನು ಮಾಡಿ ಅತ್ತೆ ಸೊಸೆಯರಿಗೆ ರಾಜೀಮಾಡಲು ಪ್ರಯತ್ನಿಸಿದನು. ಆದರೆ ಅವನ ಪ್ರಯತ್ನ ವಿಫಲವಾಯಿತೆಂದು ಹೇಳುವ ಕಾರಣವಿಲ್ಲ. ಕೊನೆಕೊನೆಗೆ ಶ್ರೀನಿವಾಸಾಚಾರಿ ಒಂದು ಉಪಾಯಮಾಡುತ್ತಿದ್ದ. ಇವರಿಬ್ಬರ ಜಗಳ ಆರಂಭವಾಯಿತೆಂದರೆ ಅವನು ಸ್ವಸ್ಥವಾಗಿ ಹೆಗಲಮೇಲೆ ನೀರುಪಂಚೆ ಹಾಕಿಕೊಂಡು ಎಲ್ಲಿಗೋ ಕಂಬಿ ಕೀಳುತ್ತಿದ್ದ. ನೆರೆಹೊರೆಯವರು ಅತ್ತೆ ಸೊಸೆಯರ ಜಗಳವನ್ನು ತೀರಿಸಲು ಪ್ರಯತ್ನಿಸಿ ಸುಸ್ತಾಗಿ ಸುಮ್ಮತ ಹೊಡೆದರು

ಹಾಗಾದರೆ ಇವರಿಬ್ಬರೂ ಜಗಳಗಂಟರೇ ? ಇಬ್ಬರೂ ಕೆಟ್ಟವರೆ ? ಎಂದಿಗೂ ಇಲ್ಲ. ರಮಾಬಾಯಿ ಸೊಸೆಗೆ ಅಷ್ಟು ಕಾಟಕೊಡುತ್ತಿದ್ದರೂ ಊರಿನವರಿಗೆಲ್ಲ ಬೆಲ್ಲದ ಹೇರಾಗಿದ್ದಳು. ಊರಲ್ಲಿ ಯಾರಿಗಾದರೂ ಕಾಯಿಲೆ ಆದರೆ ಆಕೆ ತನ್ನ ಕೈಲಾದ ನೆರವು ನೀಡುವಳು. ವಯಸ್ಸು ಅರವತ್ತು ದಾಟಿದ್ದರೂ ಮುದುಕಿ ಧಡೂತಿ ಆಗಿದ್ದಳೆಂದು ಹೇಳಬಹುದು. ಯಾರ ಮನೆಯಲ್ಲಿ ಹೆರಿಗೆಯಾದರೂ ರಮಾಬಾಯಿಯೇ ಸೂಲಗಿತ್ತಿ. ಇದರಲ್ಲಿ ಬಡವರು ಬಲ್ಲಿದರೆಂಬ ಭೇದವನ್ನು ಎಂದಿಗೂ ನೋಡುತ್ತಿರಲಿಲ್ಲ. ಅಲ್ಲದೆ ಈ ಕೆಲಸವನ್ನು, ಆಕೆ ಅದಾವ ಪುಡಿಕಾಸಿನ ಆಸೆಗೂ ಮಾಡುತ್ತಿರಲಿಲ್ಲ ತಾನು ಗೃಹಸ್ಥರ ಮನೆಯವಳಾದ್ದರಿಂದ ತಾನು ಯಾವ ಹಣವನ್ನೂ ತೆಗೆದುಕೊಳ್ಳುವುದಿಲ್ಲವೆಂದು ಕಟ್ಟುನಿಟ್ಟಾಗಿ ಹೇಳುವಳು. ಇದೂ ಅಲ್ಲದೆ ರಮಾಬಾಯಿಯ ತಂದೆ ಹೆಸರಾಂತ ವೈದ್ಯರು. ತಂದೆಯ ವೈದ್ಯಕೀಯ ಕಸುಬು ರಮಾಬಾಯಿಗೆ ಸಾಕಷ್ಟು ತಿಳಿದಿದ್ದಿತು. ಊರಿನ ಹೆಂಗಸರ ತಂಡ ತಮ್ಮ ಮಕ್ಕಳನ್ನು ಕಂಕುಳಲ್ಲಿ ಇರುಕಿಕೊಂಡು ರಮಾಬಾಯಿಯ ಮನೆಯ ಮುಂದೆ ಘೇರಾಯಿಸುತ್ತಿದ್ದಿತು. ರಮಾಬಾಯಿಯ ಔಷಧಿಯ ಗುಣವನ್ನೂ, ಹಸ್ತಗುಣವನ್ನೂ ಊರಿನಲ್ಲೆಲ್ಲ ಮುಕ್ತಕಂಠದಿಂದ ಹೊಗಳುವರು. ಎಲ್ಲರಿಗೂ ಔಷಧಿ, ಲೇಹ್ಯ, ಭಸ್ಮ ಇವನ್ನು ರಮಾಬಾಯಿಯೇ ತಯಾರಿಸುವಳು. ಆದರೆ, ಔಷಧಿಗೆ ಬಂದವರಿಂದಲೇ ಆಯಾ ಔಷಧಿಗೆ ಬೇಕಾದ ಸಾಮಾನುಗಳನ್ನು ತರಿಸಿ ಔಷಧಿ ತಯಾರಿಸುವಳು. ಒಬ್ಬರಿಂದಲೂ ಒಂದು ಚಿಕ್ಕ ಕಾಸನ್ನು ಸಹ ಮುಟ್ಟುತ್ತಿರಲಿಲ್ಲ. ಹಣ ತೆಗೆದುಕೊಂಡರೆ ಔಷಧಿಯ "ಕರಾಮತಿ"

ಹೋಗುವುದೆಂದು ಆಕೆಯ ನಂಬಿಕೆ. ನ್ಯಾಮತಿಯ ಲೇಡಿ ಡಾಕ್ಟರ್ ಮತ್ತು ಮಿಡ್ ವೈಫ್ ಕೆಲಸವನ್ನು ಅರವತ್ತು ವರ್ಷ ದಾಟಿದ ರಮಾ ಬಾಯಿಯೇ ನೋಡಿಕೊಳ್ಳುತ್ತಿದ್ದಳು.

ರಮಾಬಾಯಿಯಿಂದ ಗುಣ ಹೊಂದಿದವರು ಮುದುಕಿಯ ಋಣ ಏಕೆ ಇಟ್ಟುಕೊಳ್ಳಬೇಕೆಂದು ಕಾಳುಕಡ್ಡಿ, ಕಾಯಿಪಲ್ಯ ಮುಂತಾದವನ್ನು ತಂದು ಕೊಡುವರು ರಮಾಬಾಯಿಗೆ ಅದೇ ಜಂಬ. ತಾನು ಋಣಗೂಳು ತಿನ್ನುತ್ತಿಲ್ಲವೆಂದೂ, ತನ್ನ ಅನ್ನವನ್ನು ತಾನು ದುಡಿದು ಹುಟ್ಟಿಸಿಕೊಳ್ಳುತ್ತಿರು ವಳೆಂದೂ ಹೇಳುತ್ತಾಳೆ.

ಇದರಂತೆ ಸೀತಾಬಾಯಿಯು ಸಹ ಯಾರ ಬಾಯಲ್ಲೂ ಬೆಂದವಳಲ್ಲ. ಎಂದೂ, ಯಾರಿಗೂ ಒಂದು ಕೆಟ್ಟ ಮಾತನಾಡಿದ್ದು ಆಕೆಗೆ ಗೊತ್ತಿಲ್ಲ. ಇದ ಅಲ್ಪ ಸಮಯದಲ್ಲಿಯೇ ಇತರರ ಮನೆಯಲ್ಲಿ ಅವಲಕ್ಕಿ, ಬತ್ತ ಕುಟ್ಟುವುದು, ಜೋಳದ ಅರಳು ಮಾಡಲು ಸಹಾಯವಾಗುವುದು, ಬೀಸುವುದು, ಕುಟ್ಟು ವುದು ಮುಂತಾದುವಕ್ಕೆ ನೆರವಾಗುವಳು. ಈಕೆಯ ಋಣದಲ್ಲಿ ಬೀಳಬಾರ ದೆಂದು ಜನ ಆಕೆಗೆ ಜೋಳದ ಅರಳು, ಅವಲಕ್ಕಿ, ಹಿಟ್ಟು ಮುಂತಾದುವನ್ನು ಕೊಡುವರು. ತನ್ನ ಅತ್ತೆಯಂತೆಯೇ ತಾನು ಸಹ ಋಣಗೂಳು ತಿನ್ನುವು ದಿಲ್ಲವೆಂದು ಸೀತಾಬಾಯಿಗೆ ತುಂಬಾ ಜಂಬ. ಶ್ರೀನಿವಾಸಾಚಾರಿಯ ಹರಕುಮುರಕು ದುಡುಮೆಗೆ ತಾಯಿ ಮತ್ತು ಹೆಂಡತಿಯದು ಅಲ್ಪಸ್ವಲ್ಪ ಸೇರಿ ಹಿಟ್ಟಿನಲ್ಲಿ ಉಪ್ಪು ಬೆರಸಿದಂತಾಗಿ ಎಷ್ಟೋ ಅನುಕೂಲವಾಗಿತ್ತು. ಆದರೂ ಆನೆ ತಲೆಯಂತಹ ಸಂಸಾರ ಸಾಗುವುದಾದರೂ ಹೇಗೆ ? ಚೇಳು ಕಡಿದಂತೆ ಧಾರಣೆವಾಸಿಗಳು ಏರುತ್ತಿರುವ ಈ ದಿನಗಳಲ್ಲಿ ಅವರು ಮರ್‍ಯಾದೆಯಿಂದ ಕಾಲ ನೂಕುವುದಾದರೂ ಹೇಗೆ ?

ಒಂದು ದಿವಸ ಸಂಜೆ ಶ್ರೀನಿವಾಸಾಚಾರಿಯ ಸೋದರಮಾವನ ಮಗ ನ್ಯಾಮತಿಗೆ ಹಟಾತ್ತಾಗಿ ಬಂದ. ಮಾಧವರಾಯ ಯಾವಾಗ ಬಂದರೂ ಏನಾದರೂ ಒಂದು ಕೆಲಸದಮೇಲೆ ಬಂದಿರುತ್ತಾನೆ. ಈ ವಿಷಯವನ್ನು ಕೊಂಚ ವಿವರಿಸಿ ಹೇಳಬೇಕೆಂದರೆ ಅವನೇನಾದರೂ ಸ್ವಾರ್ಥ ಸಾಧಿತವಾಗು ವುದಿದ್ದರೆ ಮಾತ್ರ ಅವನು ಎಲ್ಲಿಗಾದರೂ ಕಾಲು ಕೀಳುವುದು. ಊರಿಂದ ಬಂದವನೇ ಹುಡುಗರು ಫುಟ್‌ಬಾಲ್ ಒದೆಯಲು ಯೋಗ್ಯವಾದ ಎರಡು

ಕಿತ್ತಳೆ ಹಣ್ಣು, ಕಡಲೆಪುರಿ, ಇತ್ಯಾದಿ ಅಗ್ಗದ ತಿಂಡಿ ಪೊಟ್ಟಣಗಳ ಅಂಗಡಿ ಗಳನ್ನೇ ಶ್ರೀನಿವಾಸಾಚಾರಿಯ ಮನೆಯ ಹಜಾರದಲ್ಲಿ ಹರವಿದ

"ಅತ್ತೆ, ರಾಧೇನ್ನ ನೋಡಿದ್ರೆ ನಿನ್ನನ್ನೇ ನೋಡಿದಹಾಗಾಗುತ್ತೆ. ಎಷ್ಟುದ್ದ ಬೆಳೆದಿದ್ದಾಳೆ ಏನು ಕಥೆ. ಅಲ್ಲಿ ನೋಡು, ಕುಮುದಾನ ಗುರ್ತೇ ನನಗೆ ಸಿಕ್ಕಲಿಲ್ಲ. ಇವನೇ ಏನು ರಾಮು, ಏನಪ್ಪಾ ಇನ್ನು ಮೇಲೆ ರಾಮಾ ಚಾರ್ರೇ ಅಂತ ನಾನು ಕರೆಯಬೇಕೇ ಹೇಗೆ....ಅದೆಲ್ಲಾ ಇರಲಿ, ಎಲ್ಲಾ ಆರೋಗ್ಯ ತಾನೇ ?"

"ಏನೋಪ್ಪ ಇಷ್ಟರಮಟ್ಟಿಗೆ ನಿಮ್ಮನೆಲ್ಲೆಲ್ಲಾ ಆರೋಗ್ಯವೇ ?"

"ಹೂನಮ್ಮಾ ನಮ್ಮನೆಲೆಲ್ಲಾ ಆರೋಗ್ಯ ಅದೇ, ನಿಮ್ಮನ್ನೆಲ್ಲಾ ನೋಡಿ ಬಹಳ ದಿನವಾಯಿತು. ನೋಡಿಕೊಂಡು ಹೋಗೋಣ ಅಂತ ಬಂದೆ. ಅಂದಹಾಗೆ ಶ್ರೀನಿವಾಸಮಾವ ಎಲ್ಲಿ ?"

"ಅವರು ಶಿವಮೊಗ್ಗಿಗೆ ಹುಜೂರು ಜಮಾಬಂದಿಗೆ ಹೋಗಿದ್ದಾರೆ. ಇವತ್ತು ರಾತ್ರಿ ಎಷ್ಟು ಹೊತ್ತಾದರೂ ಬರುತ್ತಾರೆ. ಏಳಿ ಕಾಲು ತೊಳೆದು ಕೊಳ್ಳಿ."

ಮಾಧವಾಚಾರಿ ಕಾಲು ತೊಳೆದುಕೊಂಡು ಊಟಕ್ಕೆ ಎದ್ದ. ಮನೆಗೆ ನಂಟ ಬಂದಿದ್ದಾನೆಂದು ನೀರುಳ್ಳಿ ಹುಳಿ, ಚಟ್ಣಿ ಮಾಡಿದ್ದರು. ಎಲ್ಲಿಂದಲೋ ಕಡತಂದು ಸಂಡಿಗೆ ಕರಿದಿದ್ದರು.

ರಾಧೆಗೆ ವರ ಹುಡುಕಬೇಕೆನ್ನುವ ವಿಷಯವನ್ನು ಸೀತಾಬಾಯಿಯ ವರೇ ತೆಗೆಯಲಿ ಎಂದು ಮಾಧವಾಚಾರಿ ಯಾವ ಸಂಬಂಧಸಾರಿಗೆ ಇಲ್ಲದ ವಿಚಾರಗಳನ್ನೇ ಮಾತನಾಡುತ್ತಿದ್ದ. ಸೀತಾಬಾಯಿಯವರೇ ಕೊನೆಗೆ ಹೇಳಿದರು.

"ಏನೋಪ್ಪ ನಮಗೆಲ್ಲ ವಿಷಯ ಗೊತ್ತಿದೆ. ನಮ್ಮ ರಾಧೆಗೆ ನಾವು ವರ ಹುಡುಕಿ ಹುಡುಕಿ ಸುಸ್ತಾಗಿದ್ದೇವೆ. ಸ್ವಲ್ಪ ಅನುಕೂಲವಾದ ವರ ಎಂದರೆ ಎಣೆಯಿಲ್ಲದಷ್ಟು ವರದಕ್ಷಿಣೆ ಕೇಳುತ್ತಾರೆ. ಹೇಳಿ ಕೇಳಿ ನಾವು ಬಡವರು. ಹಾಗೇಂತ ಹೇಳಿ ಹುಡುಗಿಯನ್ನ ಹಳ್ಳಕ್ಕೆ ತಳ್ಳುವುದು ಹೇಗೆ ? ನಾವು ಹೆಚ್ಚಿಗೆ ಏನನ್ನೂ ಅಪೇಕ್ಷಿಸುವುದಿಲ್ಲ. ಹುಡುಗಿ ಸುಖವಾಗಿದ್ದರೆ ಸಾಕು. ವರ ದುಡಿಯುವವನಾಗಿ ಅನ್ನಬಟ್ಟೆಗೆ ನೇರವಾಗಿದ್ದರೆ ಸಾಕು."

ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ ಆಯಿತೆಂದು ಮಾಧವಾಚಾರಿ ಹಿರಿ ಹಿರಿ ಹಿಗ್ಗಿದ.

"ನೀವು ಕನ್ಯಾ ವಿಷಯ ಹೇಳಿದಮೇಲೆ ನನಗೂ ನೆನಪಾಯಿತು. ಹೊನ್ನಾಳಿಯಲ್ಲಿ ಮೇಲುಮನೆ ವೆಂಕೋಬಾಚಾರ್‍ರು ಅಂತ ಇದ್ದಾರೆ. ಅವರಿಗೆ ಒಬ್ಬನೇ ಮಗನಿದ್ದಾನೆ. ಸ್ವಲ್ಪವಿದ್ಯಾವಂತನೂ ಹೌದು, ಬೇಕಾದ ಹಾಗೆ ಇದೆ. ಎಲ್ಲಾ ವಿಷಯ ನನಗೆ ಬಿಡಿ. ನಿಮ್ಮ ಕೈ ಕಚ್ಚದ ಹಾಗೆ ನೋಡಿಕೊಳ್ಳುತ್ತೇನೆ ಒಟ್ಟು ಮದುವೆಗೆ ಎಷ್ಟು ಖರ್ಚುಮಾಡಲು ಸಿದ್ಧರಿದ್ದೀರೆಂಬುದನ್ನು ತಿಳಿಸಿಬಿಡಿ. ಅವರಲ್ಲೆಲ್ಲಾ ಕಾರ್ಯ ಮುಗಿಸುತ್ತೇನೆ."

"ಇಷ್ಟು ಧೈರ್ಯ ಕೊಡುವವರು ನಮಗೆ ಯಾರಿದ್ದಾರೆ? ಹಣದ ವಿಚಾರ ಅವರು ಬಂದಮೇಲೆ ಮಾತನಾಡಿ ನಮ್ಮ ಮನೆತನದ ಮೇಲೆ ಅಭಿಮಾನ ಇಟ್ಟು ಹುಡುಗಿಯ ಕನ್ಯಾಸೆರೆಯನ್ನಿಷ್ಟು ಬಿಡಿಸಿ" ಎಂದು ಸೀತಾಬಾಯಿಯವರು ಹೇಳುತ್ತಾ ಎದೆ ತುಂಬಿ ಬಂದ ದುಃಖವನ್ನು ಬಹು ಕಷ್ಟದಿಂದ ಅಡಗಿಸಿ ಸೀರೆಯ ಸೆರಗನ್ನು ಕಣ್ಣಿಗೆ ಹಚ್ಚಿಕೊಂಡರು.

"ಇದೆಲ್ಲಾ ಏನು ದೊಡ್ಡ ವಿಷಯ. ನನ್ನ ಕೈಲಿ ಸಾಧ್ಯವಿಲ್ಲದಿದ್ದರೆ ಆದಾರು ಸಾಧಿಸಿಯಾರು? ನೀವು ನಿಶ್ಚಿಂತೆಯಿಂದಿರಿ."

ಎಣಿಸಿದಂತೆ ಶ್ರೀನಿವಾಸಾಚಾರಿ ಅಂದು ಮಧ್ಯಾಹ್ನ ಊರಿಗೆ ಬರಲಿಲ್ಲ. ಮಾರ್ಗಾಯಾಸದಿಂದ ಬಳಲಿದ್ದ ಮಾಧವಾಚಾರಿ ಸಂತೆಯ ಗದ್ದಲವನ್ನು ಮೀರಿಸುವ ಗದ್ದಲದಲ್ಲೇ ಹೊರಗಿನ ಪಡಸಾಲೆಯಲ್ಲಿ ಮಲಗಿದ. ಹೊರಗಿನ ಗದ್ದಲಕ್ಕೂ ಅವನ ನಿದ್ದೆಗೂ ಯಾವ ಸಂಬಂಧವೂ ಇಲ್ಲ. ಸ್ವಸ್ಥವಾಗಿ ಐದು ಗಂಟೆವರೆಗೆ ಮಲಗಿದ್ದ. ಅವನಿಗಾಗಿ ಮಾಡಿದ್ದ ಕಪ್ಪುಕಾಫಿಯು ಒಲೆಯಮೇಲೆ ಕುದಿದು, ಮರಳಿ ಕೊನೆಗೆ ಸುಸ್ತು ಹೊಡೆದು ತಣ್ಣಗಾಗಿತ್ತು. ಅದೇ ಕಾಫಿಯನ್ನು ಮತ್ತೆ ಕಾಗದದ ಚೂರುಗಳನ್ನು ಹಾಕಿ ಬಿಸಿಮಾಡಿ ಕೊಟ್ಟರು. ಹಾಗೆಯೇ ಊರೊಳಗೆ ಹೋಗಿ ಬರುತ್ತೇನೆಂದು ಹರಕಲು ಚಪ್ಪಲಿ ಹಾಕಿಕೊಂಡು ಕಾಲೆಳೆದುಕೊಂಡು ಸಾಗಿದ.

ಮನೆಯ ಹುಡುಗರಿಗೆ ಮಾಧವಾಚಾರಿಯನ್ನು ಕಂಡರೆ ತುಂಬಾ ಗೌರವ ಅವರಲ್ಲಿ ಎಷ್ಟೋ ಜನರು ಅವನನ್ನು ನೋಡಿದ್ದು ಇದೇ ಮೊದಲು. ಅವನು ತಿಂಡಿ ಕೊಟ್ಟಿದ್ದರಿಂದ ಒಂದೇ ಬಾರಿಗೆ 'ಮಾವ'ನಾದ. ಅಲ್ಲದೆ

ಎರಡು ಊಟದ ವಿನಾ ತಿಂಡಿಯನ್ನು ಕಾಣದ ಆ ಹುಡುಗನಿಗೆ ಸ್ವರ್ಗ ಮೂರು ಬೆರಳು ಮಾತ್ರ ಉಳಿಯಿತು.

ರಮಾಬಾಯಿ ಮಾಧವಾಚಾರಿ ಬಂದಾಗ ಮನೆಯಲ್ಲಿರಲಿಲ್ಲ. ಯಾತ್ರದೋ ಒಂದು ಅತಿ ಕಷ್ಟದ ಹೆರಿಗೆಗೆ ಹೋಗಿದ್ದರು. ಅವನು ಬಂದಿದ್ದಾನೆಂಬ ವಿಷಯ ಕೇಳಿ ಅವರ ಕುತೂಹಲ ಕೆರಳಿತು. ರಾಧೆಗೆ ವರ ಹುಡುಕುವ ಹೊಣೆ ಹೊತ್ತಿದ್ದಾನೆಂಬ ವಿಷಯ ಕೇಳಿದ ಮೇಲಂತೂ, "ಪುಣ್ಯಾತ್ಮ, ದೇವರ ಹಾಗೆ ಬಂದಿದ್ದಾನೆ" ಎಂಬ ಉದ್ಗಾರ ಅವರ ಬಾಯಿಂದ ಬಂದಿತು.

*　　　*　　　*

ಮಾಧವಾಚಾರಿ ಬೆಂದ ಮನೆಗಳ ಹಿರಿಯುವ ಉದ್ಯಮದಲ್ಲಿ ತೊಡಗಿದ್ದಾನೆ. ಹೊನ್ನಾಳಿಯ ಮೇಲುಮನೆ ವೆಂಕೋಬಾಚಾರಿಯ ಮಗ ಪ್ರಾಣೇಶ ಶತದಡ್ಡನೆಂಬುದು ಜನಜನಿತವಾಗಿತ್ತು. ಸ್ವಲ್ಪ ಅನುಕೂಲಸ್ಥರು ಕೊಟ್ಟು-ಕೊಂಡು ಮಾಡುವಂಥವರು ಅವನ ಮನೆ ಮೆಟ್ಟುಗಲ್ಲನ್ನು ಸಹಾ ಹತ್ತುತ್ತಿರಲಿಲ್ಲ. ಅಲ್ಲದೆ ವೆಂಕೋಬಾಚಾರಿಯ ಜಿಪುಣತನ ಒಂದು ತೆರೆದ ರಹಸ್ಯ. ತಮ್ಮ ಮಕ್ಕಳು ಹೊಟ್ಟೆಗೆ ಕೂಳಿಲ್ಲದೆ ಮೈಗೆ ಬಟ್ಟೆ ಇಲ್ಲದೆ ನಲುಗಿ ಹೋದಾರೆಂದು ನಡುಗಿದರು. ಆದರೂ ಕೆಲವರು ದಾಷ್ಟಿಕರು, ಆಚಾರಿಗೆ ಹೇಗೂ ಷಷ್ಟ್ಯಬ್ಧಿ ವಯಸ್ಸಾಗಿದೆ. ಇಂದಲ್ಲ ನಾಳೆ ಗೊಟಕ್ಕೆನ್ನುತ್ತಾನೆ. ಇರುವ ಆಸ್ತಿಯೆಲ್ಲ ಮಗನಿಗೇ ಸೇರುತ್ತದೆ. ಆಮೇಲೆ ಮಗ ಸೊಸೆ ಸುಖವಾಗಿರಬಹುದು ಎಂತ ಲೆಕ್ಕಾಚಾರ ಹಾಕಿ ಕನ್ಯೆ ಕೊಡಲು ಧಾವಿಸಿದರು. ಆದರೆ ವೆಂಕೋಬಾಚಾರಿ ಇವರ ಯಾರ ಪಟ್ಟು-ವರಸೆಗಳಿಗೂ ಸಿಗುತ್ತಿರಲಿಲ್ಲ. ತನ್ನದೇ ಒಂದು ಲೆಕ್ಕ, ಒಂದು ಎಣಿಕೆ. ಆ ಎಣಿಕೆಗೆ ಬಂದರೆ ಅವನು "ಸೈ" ಅಂದಾನು. ಹೀಗಾಗಿ ಪ್ರಾಣೇಶ ಅವಿವಾಹಿತನಾಗಿ ಉಳಿಯಬೇಕಾಗಿತ್ತು. ಕನ್ಯೆ ಆರಿಸುವುದರಲ್ಲಿ ಕೊಡು-ಕೊಳ್ಳು ವಿಷಯ ಮಾತನಾಡುವುದರಲ್ಲಿ ಪ್ರಾಣೇಶನ ಅಥವಾ ಅವನ ತಾಯಿಯ ಸಲಹೆ ಸೂಚನೆಗಳನ್ನು ತೆಗೆದುಕೊಳ್ಳುವ ಅಥವಾ ಅವರೊಂದಿಗೆ ಸಮಾಲೋಚನೆ ಮಾಡುವ ಹವ್ಯಾಸವನ್ನೇ ಇಟ್ಟುಕೊಂಡಿರಲಿಲ್ಲ. ಕನ್ಯೆ ಹೇಗಾದರೂ ಇರಲಿ, ಕನ್ಯೆಯೊಂದಿಗೆ

ಇಷ್ಟು ಹಣ ಬಂದರೆ ಸಾಕು ಎನ್ನುವುದೇ ವೆಂಕೋಬಾಚಾರಿಯ ಮಹತ್ವಾಕಾಂಕ್ಷೆಯಾಗಿತ್ತು.

ಮಾಧವಾಚಾರಿಗೆ ವೆಂಕೋಬಾಚಾರಿಯ ವಿಷಯ ಚೆನ್ನಾಗಿ ಗೊತ್ತಿತ್ತು. ಒಂದೇ ಊರಿನವರು. ವೆಂಕೋಬಾಚಾರಿಯಿಂದಲೇ ಹೇಗಾದರೂ ಮಾಡಿ ಗಂಟು ಹೊಡೆಯಬೇಕೆಂದು ಆಲೋಚಿಸಿದ. ಪ್ರಾಣೇಶನಿಗೆ ಒಂದು ಕನ್ಯೆ ಕೊಡಿಸಿದರೆ ಹೇಗೂ ನೂರಾರು ರೂಪಾಯಿಗಳು ತನ್ನ ಜೋಳಿಗೆಗೆ ಬೀಳುವುದೆಂದು ಆಲೋಚಿಸಿದ. ಆದರೆ ಅಂಥ ಕನ್ಯೆ ಎಲ್ಲಿ ಸಿಗಬೇಕು? ಒಂದು ವೇಳೆ ಸಿಕ್ಕರೆ ವೆಂಕೋಬಾಚಾರಿ ಇಲ್ಲದ ಕೌಲು ಕರಾರುಗಳನ್ನು ಹಾಕಿ ಎಲ್ಲಿ "ಇಲ್ಲ" ಎಂದುಬಿಡುತ್ತಾನೋ? ಹೀಗೆ ಆಲೋಚಿಸುತ್ತಿರುವಾಗ ಅವನಿಗೆ ನ್ಯಾಯಮತಿ ಶ್ರೀನಿವಾಸಾಚಾರಿಯ ನೆನಪು ಬಂದಿತು "ಹೌದು ಕೋಲು ಮುಖದ, ಸಾದುಗಪ್ಪಿನ ಹುಡುಗಿಯೊಂದಿತ್ತು. ಅದಕ್ಕೆ ಈಗ....ಬಂದೆ.... ಹದಿನಾರು....ಹದಿನೇಳು ವರ್ಷಗಳಿರಬಹುದು. ನಿಜ, ಶ್ರೀನಿವಾಸಾಚಾರಿಯ ಹತ್ತಿರ ವಿಷ ತೆಗೆದುಕೊಳ್ಳಲು ಸಹ ಕಿವಡು ಕಾಸಿಲ್ಲ. ಏನೋ ಅಲ್ಪ ಸ್ವಲ್ಪ ಜಮೀನಿರಬಹುದು. ಸರಿ ಅದರಲ್ಲಿ ಒಂದನ್ನು ಹುಡುಗಿಯ ಮದುವೆಗೆ ಮಾರಿಸಿ, ಮಧ್ಯೆ ಸ್ವಲ್ಪ ಕಮೀಷನ್, ದಡ್ಡ ಪ್ರಾಣೇಶನಿಗೆ ಕನ್ಯೆ ಕೊಡಿಸಿ ವೆಂಕೋಬಾಚಾರಿಯಿಂದ ಸ್ವಲ್ಪ ಕಮೀಷನ್........ ..." ಅಂತ ತಲೆಯಲ್ಲೇ ಗುಣಾಕಾರ ಭಾಗಾಕಾರ ಹಾಕಿದ.

ಮಾಧವಾಚಾರಿಯ ಉದ್ಯೋಗ ಏನೆಂಬುದು ಒಂದು ಚಿದಂಬರ ರಹಸ್ಯ. ಅವನು ಮಾಡದ ಕೆಲಸವಿಲ್ಲ, ಬಂಡವಾಳ ಮತ್ತು ಹೆಚ್ಚು ಶ್ರಮವಿಲ್ಲದ ಯಾವ ಕೆಲಸವನ್ನಾದರೂ ಅವನು ಮಾಡುತ್ತಾನೆ. ಸುಳ್ಳು ಸಾಕ್ಷಿ ಹೇಳುವುದು, ಮತ್ತು ಫೂಟ್ ಲಾಯರ್ ಕೆಲಸಮಾಡುವುದೇ ಅವನ ಕೆಲಸದಲ್ಲಿ ಪ್ರಮುಖವಾದದ್ದೆಂದು ಹೇಳಬಹುದು. ಬರಗಾಲದ ಹೆಣದಂತಿರುವ ಅವನನ್ನು ನೋಡಿದಾಗ ಹೊಟ್ಟೆಗೆ ಸರಿಯಾದ ಆಹಾರ ಬೀಳದೆ, ತಕ್ಕ ದೇಹ ಪೋಷಣೆ ಇಲ್ಲದೆ ಅವನು ಹೀಗಿದ್ದಾನೆಂದು ಯಾರಾದರೂ ಹೇಳಬಹುದು. ಆದರೆ ಆಚಾರಿ ಊಟಕ್ಕೆ ಕುಳಿತಾಗ ನೋಡಬೇಕು. ಅದೊಂದು ಪವಾಡ. ಆ ಬಡಕಲು ಶರೀರದಲ್ಲಿ ಹೋಳಿಗೆಗಳ ಮೇಲೆ ಹೋಳಿಗೆಗಳು ಇಳಿಯಲಾರಂಭಿಸುತ್ತವೆ. ಸೂರ್ಯದರ್ಶನವಾದಕೂಡಲೇ ಮಂಜು ಕರಗುವಂತೆ ಅನ್ನದ

ರಾಶಿ ಕರಗುತ್ತದೆ. ಯಾವ ಪದಾರ್ಥ ತಂದರೂ ಅವನು ಬೇಡವೆನ್ನುವುದಿಲ್ಲ. ಆದರೆ ಅವೆಲ್ಲ ಎಲ್ಲಿ ಹೋಗಿ ಕೂತುಕೊಳ್ಳುತ್ತವೆ ಎಂಬುದನ್ನು ಯಾವ ವಿಜ್ಞಾನಿಯೂ ಹೇಳಲಾರನು. ಇಷ್ಟಾದರೂ ಆಚಾರಿಯ ಹೊಟ್ಟೆ ಬೆನ್ನಿಗೆ ಹತ್ತಿರುತ್ತದೆ. ಅಷ್ಟು ಸಣ್ಣ ಹೊಟ್ಟೆಯಲ್ಲಿ ಅಷ್ಟೊಂದು ಆಹಾರ ಹೇಗೆ ಹಿಡಿಸುತ್ತದೆಂದು ಹೇಳುವುದಾದರೂ ಯಾರು ?

ಮಾಧವಾಚಾರಿ ರೈಲ್ವೆ ಕೈಕಂಬದಂತೆ ಬಹು ಎತ್ತರವಾಗಿದ್ದಾನೆ. ಎರಡು ಕೆನ್ನೆಗಳ ಮೇಲೂ ಕೂದಲಿನ ಸೊಲ್ಲೇ ಇಲ್ಲ. ತ್ರಿಕೋಣಾಕಾರದ ಮುಖದಲ್ಲಿ ಹೋತನ ಗಡ್ಡ. ಎರಡು ಕೆನ್ನೆಗಳೂ ಗುಳಿ ಬಿದ್ದಿವೆ. ಸ್ವಲ್ಪ ಮೆಳ್ಳಗಣ್ಣು. ಆಚಾರಿ ಯಾರನ್ನೋ ಉದ್ದೇಶಿಸಿ ಮಾತನಾಡುವಂತೆ ತೋರಿದರೂ ನಿಜಕ್ಕೂ ನಮ್ಮ ಆರೋಗ್ಯವನ್ನು ವಿಚಾರಿಸಿಕೊಳ್ಳುತ್ತಿರುತ್ತಾನೆ. ಯಾವಾಗ ಯಾರೊಂದಿಗೆ ಮಾತನಾಡಬೇಕಾಗಿದ್ದರೂ ಪಾಂಡುರಂಗ ವಿಠೋಬನಂತೆ ಎರಡು ಕೈಗಳನ್ನೂ ಎರಡು ಸೊಂಟಗಳ ಮೇಲೆ ಇಟ್ಟುಕೊಳ್ಳುತಾನೆ.

ಮಾಧವಾಚಾರಿಗೆ ನಾಲ್ಕು ಮಕ್ಕಳು ಸತ್ತು ಈಗ ಎರಡು ಗಂಡು ಮಕ್ಕಳಿವೆ ಒಂದು ಏಳು ವರ್ಷದ್ದು ಒಂದು ಐದು ವರ್ಷದ್ದು. ಎರಡನೇ ಹುಡುಗನ ಹೆರಿಗೆ ಆದ ಹದಿನೈದನೇ ದಿನಕ್ಕೆ ಅವನ ಹೆಂಡತಿ ಇಹಲೋಕದ ವ್ಯಾಪಾರ ತ್ಯಜಿಸಿ ಹೊರಟುಹೋದಳು. ಆಚಾರಿಯ ತಾಯಿಯೇ ಆ ಎರಡು ಹುಡುಗರಿಗೂ ತಾಯಿಯಾದಳು. ಆಚಾರಿಯದು ಚಿಕ್ಕ ಸಂಸಾರ. ಎಲ್ಲಿಂದಲೊ, ಯಾರದೋ ತಲೆ ಹೊಡೆದು ತಂದು ಹಾಕುತ್ತಾನೆ. ಯಾವುದಾದರೂ ಅಯಾಚಿತವಾಗಿ ಬಂದಲ್ಲಿ ಅವನು ಬೇಡವೆಂದಾನೆ ?

* * *

ಮಾಧವಾಚಾರಿ ಹವಾಸೇವನೆಯಾತ್ರೆ ಮುಗಿಸಿಕೊಂಡು ಬರುವ ಹೊತ್ತಿಗೆ ಶ್ರೀನಿವಾಸಾಚಾರಿ ಮನೆಗೆ ಬಂದಿದ್ದ. ಅಮಲ್ದಾರರಿಂದ ಅಲ್ಪ ವಿಷಯಕ್ಕೆ ಹೆಚ್ಚಿಗೆ ಬೈಸಿಕೊಂಡು ಸುಸ್ತಾಗಿದ್ದ. ಅವನ ಶಾನುಭೋಗತನ ಒಂದು ವಿಚಿತ್ರಕಥೆ. ಲೆಕ್ಕಪತ್ರಗಳು ಸರಿಯಾಗಿರುತ್ತಿರಲಿಲ್ಲ. ಬಾಕಿಸಾಕಿಗಳು ಇದ್ದೇ ಇರುತ್ತಿದ್ದವು. ಒಟ್ಟಿನಲ್ಲಿ ತರಲೆ ಶಾನುಭೋಗ ಅವನಲ್ಲಿ

ಶಾನುಭೋಗತನಕ್ಕಿಂತ ತರಲೆಯೇ ಹೆಚ್ಚಾಗಿತ್ತು. ಕೇವಲ ಸಮಯ ಸ್ಫೂರ್ತಿಯ ನೆರವಿನಿಂದ ಶಾನುಭೋಗತನವನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುತ್ತಿದ್ದ ಕದೀಮ ಅವನು. ಆದರೆ ಇಂದು ಅವನ ಸಮಯ ಸ್ಫೂರ್ತಿಯ ಬೇಳೆ ಬೇಯಲಿಲ್ಲ. ಅಂಕಿ ಸಂಖ್ಯೆಗಳೇ ಪ್ರಮುಖ ಪಾತ್ರ ವಹಿಸಿದ್ದುದರಿಂದ ಶ್ರೀನಿವಾಸಾಚಾರಿ ಸೋಲನ್ನೊಪ್ಪಿಕೊಳ್ಳಬೇಕಾಯಿತು. ಅರ್ಥಾತ್ ಬೈಸಿಕೊಳ್ಳಬೇಕಾಯಿತು "ಹಾಲುಗಲ್ಲದ ಹಸುಗೂಸುಗಳನ್ನು ಅಧಿಕಾರಿಗಳಾಗಿ ಹಾಕಿದರೆ ಆಗುವುದೇ ಹೀಗೆ. ಅಪದ್ಧಕ್ಕೆ ಅಪ್ಪಣೆಯೇ ಇಲ್ಲ" ಎಂದು ಸ್ವಗತ ಹೇಳಿಕೊಳ್ಳುತ್ತಿದ್ದ ರಮಾಬಾಯಿ ಮತ್ತು ಸೀತಾಬಾಯಿ ಇಬ್ಬರೂ ತಾತ್ಕಾಲಿಕ ಶಾಂತಿ ಸಾರಿ, ಮಾಧವಾಚಾರಿ ಬಂದ ಹದನೇನೆಂಬುದನ್ನು ತಿಳಿಸಿದ್ದರು. ಏನೇ ಆಗಲಿ ಬಿಗಿ ಪಟ್ಟು ಹಿಡಿಯದೆ ಸ್ವಲ್ಪ ಹೆಚ್ಚುಕಡಿಮೆ ಒಪ್ಪಿಕೊಳ್ಳಬೇಕೆಂದು ತಿಳಿಸಿದ್ದರು.

ಇಷ್ಟು ಹೊತ್ತಿಗೆ ಮಾಧವಾಚಾರಿ ಬಂದ. ಬಂದವನೇ ನಯ, ವಿನಯ, ಭಯ-ಭಕ್ತಿಗಳಿಂದ ನಮಸ್ಕಾರ ಮಾಡಿ, ಮುಖ್ಯ ಪ್ರಾಣನಂತೆ ಚಾಪೆಯಿಂದ ಆಚೆ ಒಂದೂವರೆ ಮಾರು ದೂರ ಸರಿದು ನಿಂತುಕೊಂಡ

"ನೀನು ಬಂದಿದ್ದೀಯ ಅಂತ ಮನೆಯಲ್ಲಿ ಹೇಳಿದರು. ಹಾಳು ಸರ್ಕಾರಿ ಕೆಲಸ ಅಂದ್ರೆ ಹೀಗೆ. ಅನ್ಯಾಯವಾಗಿ ಇವೊತ್ತೆಲ್ಲಾ ಶಿವಮೊಗ್ಗೆಯಲ್ಲಿ ಕೊಳೆಯಬೇಕಾಯಿತು ಅಂತೂ ನೀನು ಹೊರಡುವುದರಲ್ಲಿ ನಾನು ಮನೆಗೆ ಬಂದುಬಿದ್ದೆನಲ್ಲ ಅದೇ ಸಾಕು"—ಪೀಠಿಕಾರೂಪವಾಗಿ ಶ್ರೀನಿವಾಸಾಚಾರಿ ಹೇಳಿದ.

"ಅಲ್ಲಿಂದ ಇಲ್ಲಿಗೆ ಬಂದವನು ನಿಮ್ಮನ್ನು ನೋಡದೆ ಹೋಗುತ್ತೇನೆಯೆ ?"

ಸರಿ, ಉಭಯತ್ರರೂ ಒಬ್ಬರೊಬ್ಬರ ಆರೋಗ್ಯಭಾಗ್ಯವನ್ನು ವಿಚಾರಿಸಿದ ಶಾಸ್ತ್ರ ಮಾಡಿದರು. ಶ್ರೀನಿವಾಸಾಚಾರಿ ಗಂಟಲು ಸರಿಪಡಿಸಿಕೊಂಡು ಕೆಮ್ಮಿ, ಖ್ಯಾಕರಿಸಿ ಹೇಳಿದ.

"ಅದೇ, ನಮ್ಮ ರಾಧೇಗೆ ಹೊನ್ನಾಳಿಯಲ್ಲಿ ಯಾವುದೋ ಒಂದು ವರ ಇದೆ ಅಂತ ಹೇಳಿದೆಯಂತೆ. ನಮ್ಮವನಾದ ನೀನು ಸ್ವಲ್ಪ ಜವಾಬ್ದಾರಿ

ಹೊತ್ತರೆ ನಮ್ಮ ಮೈಮೇಲಿನ ಭಾರ ಕಡಿಮೆ ಆಗುತ್ತೆ. ವರ ಯಾವುದು ? ಅದರ ತಪಶೀಲುಗಳೇನು ?"

ತಡಕುವುದನ್ನು ಎಡವಿದಂತೆ ಶ್ರೀನಿವಾಸಾಚಾರಿಯೇ ನೇರವಾಗಿ ವಿಷಯವನ್ನು ಎತ್ತಿದ್ದು ನೋಡಿ ಮಾಧವಾಚಾರಿಗೆ ಸಮಾಧಾನವಾಯಿತು. ಆದರೂ ಆ ವಿಷಯದಲ್ಲಿ ತನಗೆ ಹೆಚ್ಚು ಆಸಕ್ತಿ ಇದೆಯೆಂಬುದನ್ನು ತೋರ್ಪಡಿಸದೆ,

"ವರಕ್ಕೇನು ಮಾವಾ, ಒಂದು ಕನ್ಯೆಗೆ ಒಂದು ವರವನ್ನು ದೇವರು ಸೃಷ್ಟಿಮಾಡಿದ್ದಾನೆ. ಅದಿರಲಿ, ಈ ಸಾರಿ ನಿಮ್ಮ ಕೆರೆ ಅಂಗಳದ ಗದ್ದೆಯಲ್ಲಿ ಏನಾದರೂ ಭತ್ತ ಆಯಿತೇನು ?"

"ಏನೋಪ್ಪಾ, ಮನೆ ಪೂರ್ತಿ ಸ್ವಲ್ಪ ಆಯಿತು ನಿಮ್ಮಲ್ಲೆಲ್ಲ ಬೆಳೆ ಚೆನ್ನಾಗಿದೆಯೇ ?"

ಒಬ್ಬ ಕದೀಮ ಮಧ್ಯಸ್ಥಗಾರ, ಇನ್ನೊಬ್ಬ ಹಳೆಯ ಶಾನುಭೋಗ. ಒಬ್ಬರೂ ಬಡಪೆಟ್ಟಿಗೆ ಸೋಲುವವರಲ್ಲ ಆದರೂ ಎದುರಾಳಿಯಿಂದಲೇ ವಿಷಯ ಹೊರಬೀಳಲೆಂದು ಇಬ್ಬರೂ ವಿಷಯಾಂತರಿಸಿ ಮಾತನಾಡುತ್ತಿದ್ದರು. ಈ ನಾಟಕವನ್ನು ಹಜಾರದ ಆಚೆ ಇದ್ದ ನಡುಮನೆಯಲ್ಲಿ ರಮಾಬಾಯಿ ಮತ್ತು ಸೀತಾಬಾಯಿ ಕುತೂಹಲದಿಂದ ನೋಡುತ್ತಿದ್ದರು. ರಾಧೆ ಸಂಜೆ ಅಡಿಗೆಯ ಕಾರ್ಯಕ್ರಮದಲ್ಲಿ ನಿರತಳಾಗಿದ್ದಳು. ಮೂರು ಹುಡುಗರು ಬೀದಿ ಆಚೆ ಕಣ್ಣುಮುಚ್ಚಾಲೆ ಆಡುತ್ತಿದ್ದರು. ಒಂದು ಹೆಣ್ಣು ಮತ್ತು ಎರಡು ಗಂಡು ಹುಡುಗರು ಮಾವ ಸೋದರಳಿಯಂದಿರ ಸರಸ ಸಂಭಾಷಣೆ ಕೇಳುತ್ತಿದ್ದರು.

"ಏಳ್ರೋ ದೊಡ್ಡವ್ರು ಮಾತನಾಡಬೇಕಾದ್ರೆ ಇಲ್ಯಾಕ್ರೋ ಕೂತಿರೋದು.'' ರಮಾಬಾಯಿ ಒಂದು ಸಿಡಿಲಿನ ಮರಿಯನ್ನು ಛೂ ಬಿಟ್ಟರು. ಮದುವೆ ವಿಚಾರ ಮಾತನಾಡಬೇಕಾದಾಗ ಹುಡುಗರೆಲ್ಲಿ ಒಂಟಿ ಸೀನು ಸೀತುಬಿಡುತ್ತಾರೋ, ಅಪಶಕುನವಾಗಿ ಮದುವೆಗೆ ಎಲ್ಲಿ ಕಲ್ಲು ಬೀಳುವುದೋ ಎಂದು ಮುದುಕಿಗೆ ಭಯ.

ನಮ್ಮ ಜೀವನದಲ್ಲಿ ಶಕುನ ಅತಿ ಪ್ರಾಮುಖ್ಯವಾದ ಪಾತ್ರ ವಹಿಸಿದೆ. ಇವು ಹೇಗೆ ಹುಟ್ಟಿಕೊಂಡವು ? ಇವಕ್ಕೆ ನಾವು ಪರಿಹಾರವೆಂದು ಮಾಡಿ

ಕೊಂಡಿರುವ ಸಮಾಧಾನಗಳು ಸರಿಯೇ ಎಂದು ಹೇಳುವರಾರು ? ಎಷ್ಟೋ ಸಾರಿ ಮದುವೆಗೆ ಮಾತುಕತೆ ನಡೆಯುತ್ತಿದ್ದಾಗ ದೀಪ ಆರಿದರೆ ಮದುವೆ ನಿಂತಂತೆಯೇ ಸರಿ. ಮದುವೆ ಮಾತು ಮುಗಿದು, ಮುಹೂರ್ತ ನಿಷ್ಕರ್ಷಿಸಿದ ಮೇಲೆ ಯಾರಿಗಾದರೂ ಕಾಯಿಲೆಯಾದರೆ, ಅಥವಾ ಅವರಿಬ್ಬರ ಮನೆಯಲ್ಲಿ ಯಾರಾದರೂ ಒಬ್ಬರು ಸತ್ತರೆ ಆ ಸಂಬಂಧ ಕೂಡಿಬರಲಿಲ್ಲವೆಂದು ಯಾವ ಯೋಚನೆಯನ್ನೂ ಮಾಡದ ಬಿಟ್ಟುಬಿಡುತ್ತಾರೆ. ಮದುವೆ ಮಾತನಾಡಲು ಹೊರಟಾಗ ದಾರಿಯಲ್ಲಿ ವಿಧವೆ ಅಡ್ಡ ಬಂದರೆ, ಯಾವುದಾದರೂ ಒಂದು ನತದೃಷ್ಟ ಬೆಕ್ಕು ಅತ್ತಿಂದ ಇತ್ತ, ಇತ್ತಿಂದ ಅತ್ತ ಹೋದರೆ ಮದುವೆಯ ಮಾತು ನಿಂತಂತೆಯೇ ಸರಿ.

ಕೆಲವರು ಶುಭಶಕುನಗಳನ್ನು ತಾವೇ ಉಂಟುಮಾಡಿಕೊಳ್ಳುತ್ತಾರೆ. ಹೇಗೆಂದರೆ ಮನೆಯ ಮುತ್ತೈದೆಗೆ ತುಂಬಿದ ಕೊಡವೊಂದನ್ನು ತೆಗೆದುಕೊಂಡು ಬರಲು ಹೇಳುತ್ತಾರೆ ಆಕೆ ಅದನ್ನು ತಂದ ಕೂಡಲೇ ತಾವು ಆಕೆಯ ಬಲಗಡೆ ಹಾದುಹೋಗುತ್ತಾರೆ ನಾನೊಬ್ಬ ಮುದುಕ ಮಾರ್ವಾಡಿಯನ್ನು ನೋಡಿದ್ದೆ. ಯಾವನಾದರೂ ಒಳ್ಳೆಯ ಉಡುಪು ಧರಿಸಿದ್ದ ಮುಸ್ಲಿಮನು ಬೀದಿಯಲ್ಲಿ ಬರುವವರೆಗೂ ತಾನು ತನ್ನ ಜಗುಲಿಯಿಂದ ಕೆಳಕ್ಕೆ ಇಳಿಯು ತ್ತಿರಲಿಲ್ಲ. ಆತ ಅತಿ ಸನಿಹಕ್ಕೆ ಬಂದೊಡನೆ ತಾನೇ ಅವನನ್ನು ಎದಿರುಮಾಡಿ ಕೊಂಡು ಹೊರಕ್ಕೆ ಹೋಗುತ್ತಿದ್ದ. ನನ್ನ ಮಿತ್ರನೊಬ್ಬ ಒಬ್ಬ ಶೆಟ್ಟಿಗೆ ಹೀಗೆ ಗಸ್ತು ಕೊಟ್ಟಿದ್ದ. ಶೆಟ್ಟಿ ಸಹ ಮಾರ್ವಾಡಿಯಂತೆ ಶಕುನ ನೋಡಿಕೊಂಡೇ ತನ್ನ ಅಂಗಡಿಗೆ ಕಾಲು ಕೀಳುತ್ತಿದ್ದ ಒಂದು ದಿನ ನನ್ನ ಸ್ನೇಹಿತ ಒಂದೊಂದು ಕೈಯಲ್ಲೂ ಒಂದೊಂದು ಎಣ್ಣೆ ಪಾತ್ರೆ ಹಿಡಿದುಕೊಂಡು ಬಂದ. ಒಂಟಿ ಹಾರವ! ಅದರಲ್ಲೂ ಕೈಯಲ್ಲಿ ಎಣ್ಣೆ ಪಾತ್ರೆ ಬೇರೆ! ಶೆಟ್ಟಿ ಶಕುನವಾಗ ಲಿಲ್ಲವೆಂದು ಮನೆಯೊಳಕ್ಕೆ ಹೋದ. ಸರಿ ಮನೆಯೊಳಕ್ಕೆ ಹೋಗಿ ದೇವರಿಗೆ ನಮಸ್ಕಾರ ಹಾಕಿ ಮತ್ತೆ ಅಂಗಡಿಗೆ ಹೋಗಲು ಧಾವಿಸಿದ. ಈ ಎಣ್ಣೆ ಪಾತ್ರೆಗಳನ್ನು ಹಿಡಿದುಕೊಂಡು ಇನ್ನೊಬ್ಬ ಬಂದ. ಶೆಟ್ಟಿ ಮತ್ತೆ ಮನೆ ಯೊಳಕ್ಕೆ ಹೋಗಿ ದೇವರಿಗೆ ನಮಸ್ಕಾರ ಹಾಕಿ ಮತ್ತೆ ಹತ್ತು ನಿಮಿಷಗಳ ತರುವಾಯ ಹೊರಕ್ಕೆ ಬಂದ. ಸರಿ ಈ ನಾಟಕ ಅವೊತ್ತು ಮಧ್ಯಾಹ್ನ ಹನ್ನೆರಡು ಗಂಟೆಯವರೆಗೂ ನಡೆಯಿತು. ಶೆಟ್ಟಿ ಸುಸ್ತು ಹೊಡೆದು

ಅಂದು ಅಂಗಡಿಯ ಬಾಗಿಲನ್ನೇ ತೆಗೆಯಲಿಲ್ಲ ಈ ನಾಟಕ ಕಟ್ಟಿದ ನನ್ನ ಮಿತ್ರ ಮತ್ತು ಅವನ ಸಂಗಡಿಗರು ಮಧ್ಯಾಹ್ನ ಸಹ ಬೆಳಗಿನಂತೆಯೇ ಮಾಡ ಬೇಕೆ ಹೇಗೆಂದು ಆಲೋಚಿಸಿದರು ಆದರೆ ಮಧ್ಯಾಹ್ನದ ಹೊತ್ತಿನಲ್ಲಿ ಎಣ್ಣೆ ಪಾತ್ರೆ ಹೊತ್ತುಕೊಂಡು ಬೀದಿ ಬೀದಿ ಅಲೆಯುವುದು ಸೂಕ್ತವಲ್ಲೆಂದು ಯೋಚಿಸಿ ಸುಮ್ಮನಾದರು. ಮತ್ತು ಶೆಟ್ಟಿಗೂ ಅನುಮಾನ ಬಂದಿತು. ಎಂದೂ ಇಲ್ಲದ ಇಷ್ಟು ಜನ ಎಣ್ಣೆ ಪಾತ್ರೆಗಳನ್ನು ಹೊತ್ತುಕೊಂಡು ಬೀದಿ ಬೀದಿ ಅಲೆಯುತ್ತಿದ್ದರೆಂದು. ಆದರೂ ಅದನ್ನು ಪ್ರತಿಭಟಿಸಿ ಅಂಗಡಿಗೆ ಹೋಗುವ ದಾಷ್ಟೀಕ ಅತನಿಗಿರಲಿಲ್ಲ.

ಹೊಳೆಹೊನ್ನೂರಿನಲ್ಲಿ ಸಹ ಇಂತಹುದೇ ಒಂದು ಸ್ವಾರಸ್ಯ ಪ್ರಸಂಗ ನಡೆಯಿತು ಒಬ್ಬ ಆಚಾರ್ರು ಒಂದು ಸಂಪ್ರದಾಯ ಇಟ್ಟುಕೊಂಡಿದ್ದರು. ತಾವು ಸ್ನಾನಮಾಡಿಕೊಂಡು ಮನೆಗೆ ಹೋಗುವಾಗ ವಿಭೂತಿ ಧರಿಸಿದ ಯಾರನ್ನೂ ನೋಡುತ್ತಿರಲಿಲ್ಲ. ದಾರಿಯಲ್ಲಿ ಅವರು ನಾಯಿ-ಕತ್ತೆಗಳನ್ನು ನೋಡಿದರೂ ಚಿಂತೆಯಿಲ್ಲ. ಆದರೆ ವಿಭೂತಿಪಟ್ಟೆ ಹಾಕಿದವರನ್ನು ನೋಡು ತ್ತಿರಲಿಲ್ಲ ಅಕಸ್ಮಾತ್ತಾಗಿ ಅಂಥವರು ಯಾರಾದರೂ ಕಣ್ಣಿಗೆ ಬಿದ್ದರೆ ಅವರು ಮತ್ತೆ ನದಿಗೆ ಹೋಗಿ ಸ್ನಾನ ಮಾಡುತ್ತಿದ್ದರು. ಈ ಅನರ್ಥ ಸಂಭವಿಸದಿರಲೆಂದು ಅವರು ಸಾಮಾನ್ಯವಾಗಿ ಮಧ್ಯಾಹ್ನ ಒಂದು ಒಂದೂ ವರೆ ಗಂಟೆ ಹೊಡೆದ ಮೇಲೆ ಸ್ನಾನಕ್ಕೆಂದು ನದಿಗೆ ಹೋಗುತ್ತಿದ್ದರು. ಇವರ ಈ ವಿಚಿತ್ರ ಸಂಪ್ರದಾಯವನ್ನು ಕಿಲಾಡಿಯೊಬ್ಬನು ಹೇಗೋ ತಿಳಿದುಕೊಂಡ. ಸರಿ ಆಚಾರ್ರು ಸ್ನಾನ ತೀರಿಸಿಕೊಂಡು ಮನೆಗೆ ಹೊರಟಾಗ ದಾರಿಯಲ್ಲಿ ನಮ್ಮ ಆಸಾಮಿ ಸಿಕ್ಕಿದ. ಹಣೆಮುಚ್ಚುವಷ್ಟು ವಿಭೂತಿ ಹಚ್ಚಿದ್ದಾನೆ. "ಆಚಾರ್ರಿಗೆ ನಮಸ್ಕಾರ. ಈಗ ಸ್ನಾನವಾಯಿತೆ?'' ಎಂದವನೇ ಹಲ್ಲು ಗಿಂಜುತ್ತ ಏನೋ ಕೆಲಸವಿದ್ದವನಂತೆ ಮುಂದೆ ಸಾಗಿದ. ''ಸ್ಮಾರ್ತ ರಂಢೀ ಗಂಡ ಎದುರಿಗೆ ಬಂದ" ಅಂತ ಹೇಳುತ್ತ ಆಚಾರ್ರು ನದಿಯ ಕಡೆಗೆ ತಮ್ಮ ಹೆಜ್ಜೆ ಹೊರಳಿಸಿದರು. ಮತ್ತೆ ಸ್ನಾನಮಾಡಿ ಬರುವಾಗ ಈತನೇ ಸಂಧಿಸಿದ. "ಏನು ಇನ್ನೂ ಇಲ್ಲೇ ಇದ್ದೀರಲ್ಲ? ಸ್ನಾನ ಆಗಿತ್ತಲ್ಲ?" ಅಂತ- ಏನೂ ತಿಳಿಯದವನಂತೆ ಹೇಳುತ್ತಾ ಮುಂದೆ ಸಾಗಿದ. ದುರುಗುಟ್ಟುತ್ತ ಆಚಾರ್ರು ನದಿಗೆ ಸ್ನಾನಕ್ಕೆ ಹೋದರು. ಸರಿ ಹೀಗೆ ಐದು ಆರು ಬಾರಿ

ಾಯಿತು. ಮನಃಪೂರ್ವಕವಾಗಿ ಈ ಮನುಷ್ಯ ಹೀಗೆ ಮಾಡುತ್ತಿದ್ದಾನೆಂದು ಆಚಾರ್ರಿಗೆ ತಿಳಿಯಿತು. ಏಳನೆಯ ಬಾರಿ ಆ ಮನುಷ್ಯ ಬಂದಾಗ, "ನಿನ್ನ ಮನಸ್ಸಿನಲ್ಲಿ ಇರ್ಲೋದಾದ್ರು ಏನು? ಹೇಳಿಬಿಡು. ನದಿ ಒಳಗೆ ಸ್ನಾನ ಮಾಡಿ ಥಂಡಿ ಹತ್ತಿ ನಾನು ಸಾಯ್ತೀನಿ'' ಎಂದು ಅಂಗಲಾಚಿದರು. "ಸ್ವಾಮಿ, ಆಚಾರ್ರೇ ನೀವು ದೊಡ್ಡವರು, ನಿಮ್ಮೆದುರಿಗೆ ಕತ್ತೆ ನಾಯಿ ಮುಂತಾದವು ಬಂದರೆ ನೀವು ಸ್ವಸ್ಥವಾಗಿ ಮನೆಗೆ ಹೋಗುತ್ತೀರಿ. ಜೀವಕೋಟಿಗಳಲ್ಲಿ ಮಾನವನೇ ಶ್ರೇಷ್ಠನೆಂದು ನೀವು ಹೇಳುತ್ತೀರಿ. ಅಂಥವನೊಬ್ಬನು ನಿಮ್ಮ ಎದುರಿಗೆ ಬಂದರೆ ಅದು ಮೈಲಿಗೆಯಾಗುತ್ತದೆಂದು ಭಾವಿಸುವ ನಿಮಗೆ ಏನು ಹೇಳಬೇಕೋ ತಿಳಿಯದು'' ಅಂತ ಒಂದು ಬಾರಿ ತನ್ನ ಮನಸ್ಸಿನಲ್ಲಿದ್ದುದ ನ್ನೆಲ್ಲಾ ಕೊಡವಿದ. ಆಚಾರ್ರು ಮರುಮಾತನಾಡದೆ ಮತ್ತೆ ನದಿಗೆ ಸ್ನಾನಕ್ಕೆ ಹೋಗದೆ ಮನೆಗೆ ಹೋದರು. ಮತ್ತು ಅಂದಿನಿಂದ ವಿಭೂತಿ ಹಚ್ಚಿಕೊಂಡವರು ಯಾರು ಬಂದರೂ ಸ್ನಾನಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ನಮ್ಮಲ್ಲಿರುವ ಈ ಶಕುನಗಳು ಮತ್ತು ಅಂಧಶ್ರದ್ಧೆಗಳ ಬಗ್ಗೆ ಬರೆಯುತ್ತಾ ಹೋದರೆ 'ಎದಿರೇಟಿ'ನಂಥ ನಾಲ್ಕು ಪುಸ್ತಕಗಳನ್ನು ಬರೆಯಬಹುದು

ಮಾಧವಾಚಾರಿ ಮದುವೆ ವಿಷಯಕ್ಕೆ ಮೌನವ್ರತಾಧಾರಿಯಾದ್ದರಿಂದ ಶ್ರೀನಿವಾಸಾಚಾರಿಯೇ ಆರಂಭಿಸಿದ.

"ಹೊನ್ನಾಳಿಯಲ್ಲಿ ಯಾವುದೋ ಒಳ್ಳೆಯ ವರ ಇದೆಯೆಂದು ನೀನು ಹೇಳಿದೆಯಂತೆ. ಯಾವುದದು?''

"ಹೊನ್ನಾಳಿ ವಿಚಾರ ನಿನಗೆ ಗೊತ್ತಿಲ್ಲದ್ದು ಯಾವುದಿದೆ ಮಾವಯ್ಯಾ ಅದೇ, ಮೇಲುಮನೆ ವೆಂಕೋಬಾಚಾರಿ ಇದಾನಲ್ಲ. ಅವನ ಮಗ ಪ್ರಾಣೇಶ. ದಿವ್ಯನಾದ ವರ. ಒಳ್ಳೇ ತೇಜಸ್ವಿಯಾಗಿದ್ದಾನೆ. ಈಗಿನ ಕಾಲದ ನವ ನಾಗರೀಕತೆಯ ವಿದ್ಯೆ ಅಷ್ಟಿಲ್ಲದಿದ್ದರೂ ತನ್ನ ಕುಲಕಸುಬಾದ ವೈದಿಕವೃತ್ತಿ ಕಲಿತಿದ್ದಾನೆ. ಅಲ್ಲದೆ ಈಗ ಪ್ರೈಮರಿ ಸ್ಕೂಲು ಮೇಷ್ಟರ ಕೆಲಸ ಸಿಕ್ಕಿದೆ. ಇದ್ದ ಊರಿನಲ್ಲೇ ಕೆಲಸ. ತಂದೆಗೆ ಒಬ್ಬನೇ ಮಗ. ಊರಿನಲ್ಲಿ ಒಂದು ಮನೆ, ಕಾಡಿನಲ್ಲಿ ಒಂದು ಹೊಲ ಇಷ್ಟಿದೆ. ನಾಲ್ಕು ಐದು ಸಾವಿರ ರೂಪಾಯಿ ಹೊರಗಡೆ ಲೇವಾದೇವಿ ಕೊಟ್ಟಿದ್ದಾರೆ. ಒಳ್ಳೆಯ ಮನೆತನ. ಯಾವ ದೃಷ್ಟಿ ಯಿಂದ ನೋಡಿದರೂ ತೆಗೆದುಹಾಕುವ ಹಾಗಿಲ್ಲ.''

ಮಾಧವಾಚಾರಿ ಮೊದಲೇ ಗಟ್ಟಿಮಾಡಿದ್ದ ಮಾತುಗಳನ್ನು ಒಪ್ಪಿಸಿದ. ಶ್ರೀನಿವಾಸಾಚಾರಿ ಮಾತನಾಡಲಿಲ್ಲ ಇಷ್ಟು ಸಮರ್ಪಕವಾದ ವರ ತನಗೆ ಸಿಕ್ಕಲಾರದೆಂದೂ, ಅದೊಂದು ಗಗನ ಕುಸುಮವೆಂದೂ ಅವನೆಣಿಸಿದ. ಅಲ್ಲದೆ ಈ ವರ ಇನ್ನು ಎಷ್ಟು ಹಣಕ್ಕೆ ಗಾಳ ಹಾಕುತ್ತದೋ ಎಂಬ ಅನುಮಾನ ಬೇರೆ ಬಾಧಿಸುತ್ತಿತ್ತು.

ಬಾಗಿಲು ಸಂದಿಯಲ್ಲಿ ಕುಳಿತಿದ್ದ ಸೀತಾಬಾಯಿಯವರು ರಾಗ ಎಳೆದರು. "ಆಚಾರ್ರೇ. ನಿಮ್ಮ ಮಾತಿನಲ್ಲಿ ನಮಗೆ ವಿಶ್ವಾಸವಿದೆ. ನಮಗೆ ಅನಾನುಕೂಲವಾದರೂ ಚಿಂತೆಯಿಲ್ಲ. ಹುಡುಗಿಗೆ ಒಂದು ಒಳ್ಳೆ ಮನೆ ಸಿಕ್ಕಿದರೆ ಸಾಕು. ಅವರ ಮರ್ಯಾದೆಗೆ ಹಣಗುವುದು ನಮ್ಮಿಂದ ಸಾಧ್ಯವಾಗುವುದಿಲ್ಲ. ಆದರೂ ನಾವು ಅವರ ಮನಸ್ಸಿಗೆ ಬೇಸರವಾಗದಂತೆ ಕೆಲಸ ಸಾಗಿಸಿಕೊಂಡು ಹೋಗಲು ಪ್ರಯತ್ನಿಸುತ್ತೇವೆ ಮುಖ್ಯ ಈ ಸಂಬಂಧ ಕುದುರಿಸುವ ಜವಾಬ್ದಾರಿ ನಿಮ್ಮ ಮೇಲಿದೆ. ನಮ್ಮ ವಿಷಯ ನಿಮಗೆ ಪೂರ್ತಿಯಾಗಿ ತಿಳಿದಿದೆ. ಇನ್ನು ನಾವು ಹೆಚ್ಚು ಮಾತನಾಡುವುದಿಲ್ಲ'' ಎಂದು ಹೇಳಿದರು.

ರಮಾಬಾಯಿಯು ಇಷ್ಟು ಸ್ವಲ್ಪದರಲ್ಲಿ ತನ್ನ ಹಿರಿಯತನಕ್ಕೆ ಧಕ್ಕೆ ಬಂದೀತೆಂದು ಆಕೆಯೂ ತಲೆ ಹಾಕಿದಳು.

"ಯಾರು ಏನು ಬೇಕಾದರೂ ಹೇಳಲಿ, ಹುಡುಗಿ ಗುಣವಂತೆ ಕೆಲಸ ಬೊಗಸೆ ಮಾಡಿಕೊಂಡು ಹೋಗುತ್ತಾಳೆ ಬರೀ ಹಣವನ್ನೇ ನೋಡುತ್ತಾ ಕುಳಿತರೆ ಹೇಗಾಗುತ್ತೆ?" ಎಂದು ಇಷ್ಟು ಮಾತಿನಲ್ಲಿ ತನ್ನ ಹಿರಿಯತನ ಕಾಪಾಡಿಕೊಂಡಳು.

ಮಾಧವಾಚಾರಿಗೆ ದಿಗ್ಭ್ರಮೆ ಹಿಡಿದಂತಾಯಿತು. ಮುಖ್ಯ ವಿಚಾರ ಬಿಟ್ಟು ಎಲ್ಲರೂ ಎಲ್ಲ ವಿಚಾರ ಮಾತನಾಡುತ್ತಿದ್ದರು. ಸುಮ್ಮನೆ ಕೊಂಕಣ ಸುತ್ತಿ ಮೈಲಾರಕ್ಕೆ ಹೋಗುವುದು ಸುಖವಿಲ್ಲೆಂದು ತಾನೇ ಆರಂಭಿಸಿದ.

"ಹೆಣ್ಣು ಗಂಡಿನ ವಿಚಾರ ಮಾತನಾಡುವಾಗ ತೆಂಗಿನಕಾಯಿ ಒಡೆದ ಹಾಗಿರಬೇಕು. ವರದಕ್ಷಿಣೆ ಎಷ್ಟು ಕೊಡುವಿರಿ, ವರೋಪಚಾರದ ವಿಷಯವೇನು, ಮದುವೆ ಒಂದು ದಿನದ್ದೇ ನಾಲ್ಕು ದಿನದ್ದೇ ಇವಿಷ್ಟನ್ನು ನೀವು ಸಮಂಜಸವಾಗಿ ಹೇಳಿದರೆ ನಾನು ಮುಂದಿನ ಮಾತುಕತೆ ನಡೆಸಲು ಅನುಕೂಲವಾಗುತ್ತೆ. ಸ್ವಲ್ಪ ಹೆಚ್ಚು ಕಡಿಮೆ ಸುಧಾರಿಸಬಹುದು. ಆದರೂ ನಿಮ್ಮ ಮುಜಲು ಎಷ್ಟರವರೆಗಿದೆ ಎಂಬುದು ನನಗೆ ತಿಳಿಯದಿದ್ದರೆ ಹೇಗೆ?''

ಶ್ರೀನಿವಾಸಾಚಾರಿ ಎತ್ತಲೋ ನೋಡುತ್ತಿದ್ದ. ಹೆಂಗಸರು ಸುಮ್ಮನಿದ್ದರು. ಏನಾದರೂ ಒಂದು ನಿರ್ಧಾರವಾಗಿ ಮಾತನಾಡಲೇಬೇಕಾದ್ದರಿಂದ ಶ್ರೀನಿವಾಸಾಚಾರಿ ಹೇಳಿದ.

" ಈ ನೆಲಗಡಲೆ ಸುಗ್ಗಿಗೆ ನನ್ನ ಕೈಗೆ ಕೊಂಚ ಹಣ ಬರುವುದಿದೆ. ಮದುವೆ ಬಾಬ್ತು ಹಳ್ಳಿಗಳ ಮೇಲೆ ಪಟ್ಟಿ ಹಾಕಬೇಕೆಂದಿದ್ದೇನೆ. ಅದು ಮಾಘ ಫಾಲ್ಗುಣದ ಹಾಗೆ ನನ್ನ ಕೈಗೆ ಬರುತ್ತದೆ. ಸದ್ಯ ಹಾಗೂ ಹೀಗೂ ಐದುನೂರು ರೂಪಾಯಿಗಳನ್ನು ಹೇಗಾದರೂ ಮಾಡಿ ಒದಗಿಸುತ್ತೇನೆ. ಅದೇ ವರದಕ್ಷಿಣೆ. ವರೋಪಚಾರಕ್ಕೆ ಐದುನೂರು ರೂಪಾಯಿಗಳನ್ನು ಮಾಘ ಫಾಲ್ಗುಣದ ಹಾಗೆ ಕೊಡುತ್ತೇನೆ. ಮದುವೆಗೆ ವಿನಾ ಕಾರಣ ಹೆಚ್ಚು ಹಣ ಖರ್ಚು ಮಾಡುವುದು ಬೇಡ. ಈ ಬಾರಿಯ ಆರಾಧನೆಯಲ್ಲಿ ಹೊನ್ನಾಳಿಯಲ್ಲಿ ಮದುವೆಯಾಗಲಿ. ಇಬ್ಬರಿಗೂ ಹಣ ಉಳಿಯುತ್ತೆ. ನಾನು ಮೊದಲಿನಹಾಗೆ ಅನುಕೂಲಸ್ಥಿತಿಯಲ್ಲಿಲ್ಲ. ನಿನ್ನ ಉಪಕಾರವನ್ನು ನಾನು ಮರೆಯುವುದಿಲ್ಲ. ಯಾವುದಾದರೂ ರೀತಿಯಿಂದ ತೀರಿಸುತ್ತೇನೆ "

ಶ್ರೀನಿವಾಸಾಚಾರಿ ಇಷ್ಟುದೂರದವರೆಗೆ ಬಂದಾನೆಂದು ಮಾಧವಾಚಾರಿ ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಆವರೂ ತನ್ನ ಸಂತೋಷವನ್ನು ಅವರೆದುರು ಪ್ರಕಟಗೊಳಿಸದೆ, "ಇಂಥ ಕೆಲಸಗಳಿಗೆ ಮುಖ್ಯವಾಗಿ ದೇವರ ಸಹಾಯ ಬೇಕು. ನನ್ನ ಕೆಲಸವನ್ನು ನಾನು ನಿರ್ವಂಚನೆಯಿಂದ ಮಾಡುತ್ತೇನೆ ಸಾಮಾನ್ಯವಾಗಿ ನಾನು ಒಂದು ಕೆಲಸಕ್ಕೆ ಕೈಹಾಕಿದರೆ ಅದೆಂದೂ ಹುಸಿಗುಂಡು ಹಾರುವುದಿಲ್ಲ" ಎಂದು ಹೇಳಿದ.

" ಆಗಲೇ ಒಂಬತ್ತು ಗಂಟೆ ಮೇಲಾಯಿತು. ಕಾಲು ತೊಳೆದುಕೊಂಡು ಊಟಕ್ಕೇಳಿ" ಎಂದು ರಮಾಬಾಯಿಯವರು ಹೇಳಿದರು.

* * *

ಹುಡುಗಿಯರಿಗೆ ವರ ಸಿಕ್ಕುವುದು ಎಷ್ಟು ಕಷ್ಟವೋ, ಹುಡುಗರಿಗೆ ನೌಕರಿ ಸಿಕ್ಕುವುದೂ ಅಷ್ಟೇ ಕಷ್ಟ. ಪ್ರಾಣೇಶನ ನೌಕರಿ ಸಮಸ್ಯೆ ಹಾಗೂ ಹೀಗೂ ಬಗೆಹರಿದಂತಾಯಿತು. ಮಗನಿಗೆ ಮದುವೆ ಮಾಡಬೇಕೆಂದು

ವೆಂಕೋಬಾಚಾರಿ ಕನ್ಯಾಬೇಟೆಗೆ ಆರಂಭಿಸಿದ. ವೆಂಕೂಬಾಯಿಯವರು ಸೊಸೆಯನ್ನು ಎಂದಿಗೆ ಕರೆದುಕೊಂಡು ಬಂದೇನೋ ಎಂದು ಹಾತೊರೆಯುತ್ತಿದ್ದರು. ಬರೀ ಬಂಗಾರದಂಥ ಸೊಸೆ ಬಂದರೆ ವೆಂಕೋಬಾಚಾರಿಗೆ ಸಾಕಾಗಿರಲಿಲ್ಲ ಅವಳು ತನ್ನೊಂದಿಗೆ ಬಂಗಾರವನ್ನು ತರುವಂಥವಳಾಗಿರಬೇಕು ವೆಂಕೋಬಾಚಾರಿಯ ಜಿಪುಣತನ ಕರ್ಣಾಕರ್ಣಿಯಾಗಿ ಜನಜನಿತವಾಗಿತ್ತು ಅವನ ಜಿಪುಣತನಕ್ಕಿಂತ ಅವನ ಕೋಪಕ್ಕೆ ಹೆದರಿದವರೇ ಹೆಚ್ಚು ಜನ ಇಷ್ಟಾದ ಮೇಲೆ ಯಾವುದಾದರೂ ಒಂದು ಕನ್ಯೆ ಬಂದರೆ, ಆ ಕನ್ಯೆ ಹಣ ತರುವುದಿಲ್ಲವೆಂಬ ಅಂಶ ಮುಂದಟ್ಟಾದೊಡನೆ ಅದನ್ನು ಹಾಗೆಯೇ ಕೈಬಿಡುತ್ತಿದ್ದ.

ಪ್ರಾಣೇಶನಿಗೂ ಹೆಂಡತಿ ಅನ್ನುವ ವಸ್ತುವೊಂದು ಬಂದರೆ ಸಾಕೆನ್ನಿಸಿತ್ತು. ಅವನು ಸಹ ಪ್ರತ್ಯಕ್ಷವಾಗಿ ಮತ್ತು ಪರ್ಯಾಯವಾಗಿ ತಂದೆಗೆ ಒತ್ತಾಯ ಹಾಕಲಾರಂಭಿಸಿದ. ಇದೇ ಸಮಯವನ್ನು ಸಾಧಿಸಿ ಮಾಧವಾಚಾರಿ ವೆಂಕೋಬಾಚಾರಿಯ ಮನೆಗೆ ಬಂದ. ಮತ್ತು ವೆಂಕೋಬಾಚಾರಿ ಮನೆಯಲ್ಲಿಲ್ಲದ ಸಮಯವನ್ನು ಸಾಧಿಸಿ ಅವನ ಮನೆಗೆ ಬಂದಿದ್ದ. ತನ್ನ ಕಾರ್ಯಸಾಧನೆಗೆ ಮೊದಲು ಪೀಠಿಕೆಯನ್ನು ಹಾಕಿ ಅದನ್ನು ಯಥಾವತ್ತಾಗಿ ಸಾಗಿಸಲು ಅಣಿಮಾಡಿಕೊಂಡ

ಮಾಧವಾಚಾರಿಯನ್ನು ವೆಂಕೂಬಾಯಿಯವರು ಹಜಾರದಲ್ಲಿ ಹಾಕಿದ್ದ ಚಾಪೆಯ ಮೇಲೆ ಕುಳಿತುಕೊಳ್ಳಲು ಹೇಳಿದರು. ವೆಂಕೋಬಾಚಾರಿ ಇತರರ ಮನೆಯಲ್ಲಿ ಮತ್ತು ಆಗಾಗ್ಗೆ ಯಾರಿಗೂ ಕಾಣದ ಹಾಗೆ ಕಾಫಿ ಕುಡಿಯುತ್ತಿದ್ದ. ಆದರೆ ಮನೆಯಲ್ಲಿ ಮಾತ್ರ ಕಾಫಿ ವಾಸನೆಯೇ ಇರಲಿಲ್ಲ. ಪ್ರಾಣೇಶನಿಗೆ ಹೋಟಲಿನ ವ್ಯಾಧಿ ಅಂಟಿದ್ದರಿಂದ ಅವನ ಕೈಗೆ ಪುಡಿಕಾಸು ಸಿಕ್ಕಾಗಲೆಲ್ಲ ಹೋಟಲಿನ ಗೋಲಕಕ್ಕೆ ಅದನ್ನು ಹಾಕುತ್ತಿದ್ದ.

"ಇಷ್ಟು ವಯಸ್ಸಾದ ಮೇಲೂ ನೀವು ಸಣ್ಣ ಹುಡುಗಿಯಂತೆ ಮನೆ ಕೆಲಸಗಳನ್ನು ಮಾಡಬೇಕಾಗಿರುವುದನ್ನು ನೋಡಿದರೆ ನನ್ನ ಮನಸ್ಸು ಚುರ್ರೆನ್ನುತ್ತದೆ. ಸೊಸೆಗೆ ಮನೆಯ ಯಾಜಮಾನ್ಯ ವಹಿಸಿ ನೀವು ರಾಮ, ಕೃಷ್ಣ ಅಂತ ಸುಮ್ಮನೆ ಕೂಡುವ ಕಾಲ ಇದು. ಆದರೇನು ? ಯಾವುದಕ್ಕೂ ಯೋಗ ಬರಬೇಕು. ಯಾವ ಕನ್ಯಾರತ್ನ ಪ್ರಾಣೇಶನ ಕೊರಳಿಗೆ

ಮಾಲೆ ಹಿಡಿದಿದೆಯೋ ತಿಳಿದವರಾರು ?" ಎಂದು ಲೋಕಾಭಿರಾಮವಾಗಿ ಮಾಧವಾಚಾರಿ ಮಾತಿಗಾರಂಭಿಸಿದ.

ಸ್ಕೂಲು ಬಿಟ್ಟದ್ದರಿಂದ ಈ ವೇಳೆಗೆ ಪ್ರಾಣೇಶ ಬಂದ. ದಿನವೂ ಬೋಳುತಲೆಗೆ ಕರಿಯ ಟೋಪಿ ಹಾಕುತ್ತಿದ್ದ ಪ್ರಾಣೇಶ ಇವೊತ್ತು ಇನ್ಸ್ಪೆಕ್ಟರು ಬರುತ್ತಾರೆಂಬ ದಿಗಿಲಿನಿಂದ ರುಮಾಲೆಂದು ಹೇಳಲಾದ ಒಂದು ಬಿಳಿಯ ಶಿಂಬೆ ಸುತ್ತಿದ್ದ. ತಲೆಗೆ ಗಾಯವಾದವರು ಬ್ಯಾಂಡೇಜ್ ಕಟ್ಟಿದ ಹಾಗಿತ್ತು ಈ ರುಮಾಲು. ದಡ್ಡ ಪ್ರಾಣೇಶ ಹುಡುಗರಿಗೆ ಏನು ಪಾಠ ಹೇಳಿ ಕೊಡುತ್ತಿದ್ದನೋ, ಹುಡುಗರು ಅದೆಷ್ಟು ಬುದ್ಧಿವಂತರಾಗುತ್ತಿದ್ದರೋ ಹೇಳುವರಾರು ?

ತಾಯಿ ಕಣ್ಣುಸನ್ನೆಯಿಂದ ಪ್ರಾಣೇಶನನ್ನು ಒಳಕ್ಕೆ ಕರೆದರು. ಪ್ರಾಣೇಶ ಒಳಕ್ಕೆ ಹೋಗಿ ಬೆಳ್ಳಿಯ ಲೋಟದಲ್ಲಿ ಬೆಲ್ಲದ ಪಾನಕವನ್ನು ಮಾಧವಾಚಾರಿಯ ಮುಂದೆ ತಂದಿಟ್ಟು ದೂರ ಸರಿದು ನಿಂತುಕೊಂಡ. ಮಾಧವಾಚಾರಿಯ ಬಾಯಿಂದ ಆ ಕೂಡಲೇ ಉದ್ಗಾರವೊಂದು ಹೊರಬಿತ್ತು. "ಇಂಥಾ ಬಂಗಾರದಂಥ ವರನಿಗೆ ಕನ್ಯೆ ಸಿಕ್ಕಿಲ್ಲವೆಂದರೆ ಏನು ಅನ್ಯಾಯ ? ಮೊನ್ನೆ ನೋಡಿ, ವೆಂಕೂಬಾಯಿಯವರೇ, ನಿತ್ಯಾತ್ರಿ ರಾಮಾಚಾರಿಯ ಮಗ ನಿಗೆ ಎರಡು ಖರ್ಚು ಹಾಕಿ ಮದುವೆ ಮಾಡಿಕೊಟ್ಟರು ಅದೃಷ್ಟ ಅಂದರೆ ಹುಡುಗಿ ರತಿದೇವಿಯಂತಿದ್ದಾಳೆ. ದಿವ್ಯನಾದ ಸಂಬಂಧ. ಸುಮ್ಮನೆ ಹೊಗಳಿಕೊಳ್ಳಬಾರದೂ ಅನ್ನಿ. ನಾನೇ ಈ ಸಂಬಂಧ ಕುದುರಿಸಿದ್ದು."

ವೆಂಕೂಬಾಯಿಯವರ ಬಾಯಲ್ಲಿ ನೀರೂರಿತು

"ನೀವು ನಾಲ್ಕು ದೇಶ ಸುತ್ತುವವರು. ನಮ್ಮ ಪ್ರಾಣಿಗೆ ಎಲ್ಲಿಯಾದರೂ ಒಂದು ಒಳ್ಳೇ ಕನ್ಯೆ ಹುಡುಕಿ. ಅವನಿಗೆ ಮದುವೆಯಾದ್ದನ್ನು ಕಣ್ಣುತುಂಬಾ ನೋಡಬೇಕೆನ್ನುವುದೊಂದೇ ನನ್ನ ಆಸೆ. ಉಳಿದ ಲೌಕಿಕ ವಿಚಾರ ಅವರು ಬಂದಾಗ ಮಾತನಾಡಿ.''

"ಅಕೋ ನೀವಾಗಿ ಈ ಮಾತು ಹೇಳಿದ್ದು ಈಗ ನೆನಪಿಗೆ ಬಂತು. ಮೊನ್ನೆ ಯಾವುದೋ ಒಂದು ಕೆಲಸಕ್ಕೆ ನ್ಯಾಮತಿಗೆ ಹೋಗಿದ್ದೆ. ಅಲ್ಲೊಂದು ಕನ್ಯೆ ನೋಡಿದೆ. ನಿಮ್ಮ ಮನೆಗೆ ಬರಲು ಬಹಳ ಯೋಗ್ಯ ವಾಗಿದೆ. ಹುಡುಗಿ ಸುಲಕ್ಷಣವಾಗಿದ್ದಾಳೆ. ಕೆಲಸ-ಬೊಗಸೆ ಮಾಡಿಕೊಂಡು

ನಿಮ್ಮ ಮನೆತನಕ್ಕೆ ಕೀರ್ತಿ ತರುತ್ತಾಳೆ. ಅವರು ಸಹ ವರ ಹುಡುಕುವ ತರಾತುರಿಯಲ್ಲಿದ್ದರು. ಆಗಲಿ, ಆಚಾರ್ರು ಬಂದ ಕೂಡಲೆ ನಾನು ಬಂದಿದೆ ಅಂತ ತಿಳಿಸಿ. ಇದೇನು ಮಹಾ ದೊಡ್ಡ ಕೆಲಸ. ನೀವು ಒತ್ತಾಯ ಹಾಕಿ. ಮಲ್ಲಿಗೆ ಹುವ್ವಿನ ಸರ ಎತ್ತಿದ ಹಾಗೆ ಕೆಲಸವಾಗುತ್ತೆ" ಎಂದು ಮಾಧವಾಚಾರಿ ತಾನು ಹೇಳಬೇಕೆಂದಿದ್ದನ್ನೆಲ್ಲ ಹೇಳಿ ಹೊರಟೇಹೋದ.

*　　　　*　　　　*

ಮಾಧವಾಚಾರಿಯ ಕುಲ, ಗೋತ್ರ ಮತ್ತು ಅವನ ಕಸುಬು, ಚಾಕಚಕ್ಯ ಮುಂತಾದವುಗಳ ವಿಚಾರವಾಗಿ ಶ್ರೀನಿವಾಸಾಚಾರಿಗೆ ಕೂಲಂಕುಶವಾಗಿ ಗೊತ್ತಿತ್ತು. ಅವನು ಮೋಟಾರು ಹತ್ತುವಾಗ ವೆಂಕೋಬಾಚಾರಿ ಒಂದು ಗುಟ್ಟು ಮಾತನ್ನು ಅವನ ಕಿವಿಯ ಮೇಲೆ ಹಾಕಿದ್ದ. "ಸಾವಿರ ಸುಳ್ಳು ಹೇಳಿ ಒಂದು ಕಲ್ಯಾಣ ಕಟ್ಟು ಅಂತ ಗಾದೆ ಮಾತಿದೆ. ನೀನು ಸ್ವಲ್ಪ ಸಹಾಯ ಮಾಡು. ನಿನ್ನ ಉಪಕಾರ ನಾನೆಂದಿಗೂ ಇಟ್ಟುಕೊಳ್ಳುವುದಿಲ್ಲ" ಅಂತ ಹೇಳಿದ್ದ. ಶ್ರೀನಿವಾಸಾಚಾರಿಯಿಂದ ಏನೂ ಅನುಕೂಲವಾಗುವುದಿಲ್ಲವೆಂದು ಮಾಧವಾಚಾರಿಗೆ ಗೊತ್ತಿತ್ತು. ವೆಂಕೋಬಾಚಾರಿಯಿಂದ ಆದಷ್ಟು ಹೆಚ್ಚು ಹಣ ಗಿಟ್ಟಿಸಬೇಕೆಂದು ಅವನು ಹವಣಿಸುತ್ತಿದ್ದ. ಒಂದು ವೇಳೆ ಶ್ರೀನಿವಾಸಾಚಾರಿಯಿಂದ ಅನಿರೀಕ್ಷಿತವಾಗಿ ಏನಾದರೂ ಬಂದರೆ ಬೇಡವೆನ್ನುವರಾರು ?

ಹಳ್ಳಿಗರ ಮೇಲೆ ಮದುವೆ ಪಟ್ಟಿ ಹಾಕಿ ಹಣ ವಸೂಲ್ಮಾಡುವುದಾಗಿ ಶ್ರೀನಿವಾಸಾಚಾರಿ ಮಾಧವಾಚಾರಿ ಎದುರು ಹೇಳಿದ್ದನಷ್ಟೆ. ಈಗಾಗಲೇ ಅವನು ಮೂರು ಸಾರಿ ರಾಧೆಯ ಮದುವೆಗೆಂದು ಹಳ್ಳಿಗಳಲ್ಲಿ ಪಟ್ಟಿ ಎತ್ತಿದ್ದ. ಆ ಹಣದಲ್ಲಿ ಒಂದು ಕುರುಡು ಕಾಸು ಸಹ ಅವನಲ್ಲಿರಲಿಲ್ಲ. ಆ ಹಣವೆಲ್ಲ ಸಂಸಾರ ರಾಕ್ಷಸನಿಗೆ ಆಹುತಿಯಾಗಿತ್ತು. ಇನ್ನು ಹಳ್ಳಿಗರನ್ನು ಕೇಳಿದರೆ ಅವರು ದೊಣ್ಣೆ ತೆಗೆದುಕೊಳ್ಳಲು ಸಿದ್ಧರಾಗಿದ್ದರು.

ಇದ್ದ ಜಮೀನುಗಳೆಲ್ಲವೂ ಬೇರೆಯವರಿಗೆ ಅಡವಾಗಿ ಎಷ್ಟೋ ವರ್ಷಗಳಾಗಿ ಅಸಲಿನ ಸಮಕ್ಕೆ ಬಡ್ಡಿ ಬೆಳೆದಿತ್ತು. ಆ ಜಮೀನುಗಳನ್ನು ಬಿಡಿಸಿಕೊಳ್ಳುವ ಯೋಚನೆಯನ್ನೇ ಅವನು ಮಾಡುವ ಹಾಗಿರಲಿಲ್ಲ. ಮನೆಯಲ್ಲಿ

ಮಾರಬಹುದಾದ ಪದಾರ್ಥಗಳನ್ನೆಲ್ಲಾ ಮಾರಿ ಎಷ್ಟೋ ಕಾಲವಾಗಿತ್ತು. ಇನ್ನು ಮಾರಿಕೊಳ್ಳುವುದೆಂದರೆ ತನ್ನನ್ನು ಮಾರಿಕೊಳ್ಳಬಹುದಾಗಿತ್ತು- ಯಾರಾದರೂ ಪುಣ್ಯಾತ್ಮರು ಕೊಳ್ಳುವದಿದ್ದರೆ. ಶ್ರೀನಿವಾಸಾಚಾರಿ ಎಲ್ಲ ವನ್ನೂ ಕಳೆದುಕೊಂಡಿದ್ದರೂ ಧೃತಿಯನ್ನು ಮಾತ್ರ ಕಳೆದುಕೊಂಡಿರಲಿಲ್ಲ. ಅವನಂಥ ಆಶಾವಾದಿ ಸಿಕ್ಕುವುದು ಅಪರೂಪವೇ ಸರಿ. ಆ ಆಶಾವಾದಿತನ ಅವನಲ್ಲಿಲ್ಲದಿದ್ದರೆ ಅವನು ಆತ್ಮಹತ್ಯೆ ಮಾಡಿಕೊಂಡು ಎಷ್ಟೋ ವರ್ಷಗಳಾಗ ಬೇಕಾಗಿತ್ತು.

ಮಾಧವಾಚಾರಿಯ ಸಹಾಯದಿಂದ ರಾಧೆಯ ಮದುವೆ ಆದರೆ ಆಗಬೇಕು, ಇಲ್ಲವಾದರೆ ಇಲ್ಲ ಎಂಬುದು ಅವನಿಗೆ ನಿರ್ಧಾರವಾಯಿತು. ಹಣದ ಆಸೆ ತೋರಿಸಿದರೆ ಮಾಧವಾಚಾರಿ ಕಾರ್ಯ ಸಾಧಿಸುವನೆಂಬುದೂ ಅವನಿಗೆ ಗೊತ್ತಿತ್ತು.

ಮಾಧವಾಚಾರಿ ಇಲ್ಲದ ಸುಳ್ಳುಗಳನ್ನೆಲ್ಲಾ ಹೇಳಿ ವೆಂಕೋಬಾಚಾರಿ ಯನ್ನು ಒಪ್ಪಿಸಿದರೂ ಮದುವೆಗೆ ಕನಿಷ್ಟಪಕ್ಷ ಐದುನೂರು ರೂಪಾಯಿ ಗಳಾದರೂ ಬೇಕು. ಎಲ್ಲೆಲ್ಲಿಯೋ ಗಾಳ ಹಾಕಿದ. ಆದರೆ ಯಾವ ಮೀನೂ ಆ ಗಾಳಕ್ಕೆ ಬೀಳಲಿಲ್ಲ. ಅಣ್ಣತಮ್ಮಂದಿರಿಗೆ ಬಾಂಧವ್ಯ ಹರಿದು ಹೋಗಿ ಎಷ್ಟೋ ವರ್ಷಗಳಾಗಿದ್ದುವು. ಶ್ರೀನಿವಾಸಾಚಾರಿ ತನ್ನ ಮೂರು ಜನ ತಮ್ಮಂದಿರಿಗೂ ಕಾಗದಗಳನ್ನು ಬರೆದ. ರಾಧೆಗೆ ವರ ಗೊತ್ತಾಗಿರುವು ದಾಗಿಯೂ ಅವರೆಲ್ಲರೂ ತಮ್ಮಿಂದಾದ ಸಹಾಯ ಮಾಡಿ ಹುಡುಗಿಯ ಕನ್ಯಾ ಸೆರೆ ಬಿಡಿಸಬೇಕೆಂದೂ ಅಂಗಲಾಚಿ ಕೇಳಿಕೊಂಡ. ತಾನು ತೀರ ನಿರ್ಗತಿಕ ಅವಸ್ಥೆಗೆ ಬಂದಿದ್ದರಿಂದ ಈ ರೀತಿ ಕಾಗದಗಳನ್ನು ಬರೆಯಬೇಕಾಗಿದೆಯೆಂದು ಹೇಳಿಕೊಂಡ. ಅಣ್ಣನ ಋಣ ತಿಂದಿದ್ದ ತಮ್ಮಂದಿರಿಗೂ ಅಯ್ಯೋ ಎನಿಸಿತು. ಅಣ್ಣನಿಗಿಂತ ಅತ್ತಿಗೆ ಮತ್ತು ರಾಧೆಯ ಕಡೆ ಲಕ್ಷವಿಟ್ಟು ಅವರು ತಲಾ ನೂರು ರೂಪಾಯಿಗಳನ್ನು ಕಳಿಸಿದರು.

ಮುನ್ನೂರು ರೂಪಾಯಿಗಳಿಂದ ಮದುವೆ ಆಗುವುದಿಲ್ಲವೆಂದು ಶ್ರೀನಿವಾಸಾಚಾರಿಗೆ ಚೆನ್ನಾಗಿ ತಿಳಿದಿತ್ತು. ಆದರೂ ಹಣಕ್ಕಿಂತಲೂ ಹೆಚ್ಚಾಗಿ ಸುಳ್ಳನ್ನೇ ವೆಚ್ಚಮಾಡಿ ಮಗಳ ಮದುವೆ ಆಗಮಾಡಬೇಕೆಂದು ಅವನು ಮನಸಾ ನಿಶ್ಚೈಸಿದ. ಇವನ ರಾಗಕ್ಕೆ ತಾಳ ಹಾಕಲು ಸೋದರಳಿಯ

ಮಾಧವಾಚಾರಿ ಸಿದ್ಧನಾಗಿದ್ದ. ಅಂತೂ ನಾಟಕವನ್ನು ಹೂಡಿಯೇ ಹೂಡಿದರು.

ವೆಂಕೋಬಾಚಾರಿಯೂ ತನ್ನ ತಲೆಯಲ್ಲಿ ಗುಣಾಕಾರ ಭಾಗಾಕಾರ ಗಳನ್ನು ಹಾಕುತ್ತಿದ್ದ. ಶ್ರೀನಿವಾಸಾಚಾರಿಯಿಂದ ಹಣ ಬರುವುದಲ್ಲದೆ ತಾನೂ ಸಹ ಬೇರೆ ಬೇರೆ ಲೌಕಿಕದಲ್ಲಿ ಹಣ ಎತ್ತುವ ಸಂಚು ನಡೆಸಿದ್ದ. ಹಾಗೂ ಹೀಗೂ ತಾನು ಪೌರೋಹಿತ್ಯ ನಡೆಸುವ ಹಳ್ಳಿಗಳ ಮೇಲೆ ಹೋಗಿ ಅವರ ಮೇಲೆ "ಜೆಸಿಯಾ" ತಲೆಗಂದಾಯವನ್ನು ವಸೂಲು ಮಾಡಿದ್ದ.

ಶ್ರೀನಿವಾಸಾಚಾರಿ ತನ್ನ ಮಗಳು ಮತ್ತು ಹೆಂಡತಿಯನ್ನು ಕರೆದು ಕೊಂಡು ಹೊನ್ನಾಳಿಗೆ ಕನ್ಯಾ ತೋರಿಸಿ ನಿಶ್ಚಿತಾರ್ಥ ಮಾಡಿಕೊಳ್ಳಲು ಬರುವುಧಾಗಿ ಮಾಧವಾಚಾರಿಯ ಮೂಲಕ ತಿಳಿಸಿದ್ದ. ಸಂಪ್ರದಾಯದಂತೆ ವೆಂಕೋಬಾಚಾರಿಯೇ ಬೀಗರ ಮನೆಗೆ ಮಗ, ಹೆಂಡತಿಯರೊಡನೆ ಹೋಗ ಬೇಕಿತ್ತು. ಆದರೆ ಶ್ರೀನಿವಾಸಾಚಾರಿ ತಾನೇ ಬರುವುದಾಗಿ ಬರೆದಿದ್ದರಿಂದ, ಅದಕ್ಕೆ ತಗಲುವ ಹಣ ಉಳಿತಾಯವಾಗುವುದೆಂದು ಲೆಕ್ಕ ಹಾಕಿದ. ಶ್ರೀನಿವಾಸಾಚಾರಿಯೂ ಈ ವಿಚಾರದಲ್ಲಿ ಸಾಧಕ ಬಾಧಕಗಳೇನೆಂಬುದನ್ನು ಲೆಕ್ಕ ಹಾಕಿದ್ದ. ವೆಂಕೋಬಾಚಾರಿ ನ್ಯಾಮತಿಗೆ ಬಂದರೆ ತನ್ನ ಬಡತನದ ಗುಟ್ಟೆಲ್ಲವೂ ರಟ್ಟಾಗುವುದೆಂಬ ದಿಗಿಲು ಅವನಿಗಿತ್ತು. ಕಿಡಿಗೇಡಿಗಳು ಇಲ್ಲದ ಸಲ್ಲದ ವಿಚಾರಗಳನ್ನು ವೆಂಕೋಬಾಚಾರಿಗೆ ತಿಳಿಸಿದರೆ ಮದುವೆಗೆ ಕಲ್ಲು ಬೀಳುವುದೆಂದು ಅವನಿಗೆ ಗೊತ್ತಿತ್ತು.

ಸೋಮವಾರ ಹನ್ನೊಂದು ಗಂಟೆಯ ಬಸ್ಸಿಗೆ ಶ್ರೀನಿವಾಸಾಚಾರಿ ಹೆಂಡತಿ ಮತ್ತು ಮಗಳೊಡನೆ ಹೊನ್ನಾಳಿಗೆ ಹೊರಟರು. ಮೂರು ಜನ ಹೋದರೆ ಕಾರ್ಯಕ್ಕೆ ವಿಘ್ನ ಬರುತ್ತದೆಂಬ ಕುರುಡು ನಂಬಿಕೆಯಿಂದ, ಕಂಕುಳಲ್ಲಿ ಮುಂಗಡಿ ಕೂಸನ್ನು ಇರುಕಿಕೊಂಡು ಬಲಗಾಲನ್ನು ಬಸ್ಸಿನಲ್ಲಿಟ್ಟು ಶ್ರೀನಿವಾಸಾಚಾರಿಯ ಹೆಂಡತಿ ಹತ್ತಿದರು

ನ್ಯಾಮತಿಯ ರೇಂಜ್ ಇನ್‌ಸ್ಪೆಕ್ಟರರ ಸೀರೆ ಮತ್ತು ಕೆಲವು ಒಡವೆ ವಸ್ತ್ರಗಳಿಂದ ಸಾಲಂಕೃತೆಯಾಗಿ ರಾಧೆ ಶೋಭಿಸುತ್ತಿದ್ದಳು. ಶ್ರೀನಿವಾಸಾಚಾರಿ ತಾನು ಕಚೇರಿಗೆ ಹೋಗುವಾಗ ಹಾಕಿಕೊಳ್ಳುತ್ತಿದ್ದ, ಇದ್ದುದರಲ್ಲಿಯೇ ಉತ್ತಮವಾದ ಬಟ್ಟೆ ಬರೆಗಳನ್ನು ಹಾಕಿಕೊಂಡಿದ್ದನು. ಸೀತಾಬಾಯಿ

ಯವರು ತಮ್ಮ ಲಗ್ನದಲ್ಲಿನ ಧರ್ವಾವರದ ರೇಷ್ಮೆ ಸೀರೆಯನ್ನುಟ್ಟಿದ್ದರು. ಅದು ಮೊದಲು ಯಾವ ಬಣ್ಣದ್ದಾಗಿತ್ತೆಂದು ಹೇಳಲು ಸಾಧ್ಯವಿರಲಿಲ್ಲ. ಅಂತೆಯೇ ಈಗಿನ ಬಣ್ಣ ಯಾವುದಿತ್ತೆಂದು ಹೇಳುವುದೂ ಸಾಧ್ಯವಿರಲಿಲ್ಲ. ಕಾರಣ, ಕಾಮನ ಬಿಲ್ಲಿನಲ್ಲಿ ಕಾಣಬರುವ ಏಳು ಬಣ್ಣಗಳೂ ಅದರಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದವು.

ಹೊನ್ನಾಳಿಗೆ ಬಸ್ ಬಂದಿತು. ಬಸ್ ಸ್ಟಾಂಡಿನಲ್ಲಿ ಮಾಧವಾಚಾರಿ ತನ್ನ ಅಳಿಸಲಾರದ ಮುಗುಳ್ನಗೆಯೊಂದಿಗೆ ಎದಿರ್ಗೊಳ್ಳಲು ಸಿದ್ಧವಾಗಿದ್ದ. ಶ್ರೀನಿವಾಸಾಚಾರಿಯ ಪಾರ್ಟಿಯನ್ನು ನೋಡಿ ಅರ್ಥಗರ್ಭಿತ ನಗೆಯೊಂದನ್ನು ಬೀರಿ ಸ್ವಾಗತಿಸಿದ.

"ಮಾವಾ, ನೀವೇನೂ ಯೋಚನೆ ಮಾಡಬೇಡಿ, ಒಂದು ಹೆಚ್ಚು ಒಂದು ಕಡಿಮೆ, ಮದುವೆ ಆಯ್ತು ಎಂತ ಅನ್ನಿಸಿಬಿಡ್ತೇನೆ. ಇಂಥಾ ನೂರಾರು ಮದುವೆಗಳನ್ನು ಮಾಡಿಸಿದ ಕೀರ್ತಿ ನನ್ನ ಸೆರಗಿಗಿದೆ. ಇದು ಯಾವ ದೊಡ್ಡ ಮಾತು ?"

"ಒಂದು ಹೆಚ್ಚು ಒಂದು ಕಡಿಮೆ ಅಂತ ಹೇಳಿದೆ. ನನ್ನಲ್ಲಿರುವದೆಲ್ಲಾ ಕಡಿಮೆಯೇ. ನನಗೆ ಹೆಚ್ಚಿರುವುದೆಂದರೆ ಮಕ್ಕಳು ಮತ್ತು ಸಾಲ. ಇವು ಎರಡನ್ನೂ ನಾನು ತೊಡೆದುಹಾಕಲಾರೆ. ರಾಧೆಯ ಮದುವೆಯಾದರೆ ನನಗೆ ಉಸಿರಾಡಲು ಪುರಸೊತ್ತು ಸಿಗುತ್ತದೆ. ಆಮೇಲೊಬ್ಬ ದೇವರು, ನೋಡೋಣವಂತೆ."

ಸೀತಾಬಾಯಿಯವರು ತಮ್ಮ ಮನಸ್ಸಿನಲ್ಲಿ ಇದ್ದುದನ್ನೆಲ್ಲಾ ಒಂದೇ ಬಾರಿಗೆ ಮಾಧವಾಚಾರಿಗೆ ಹೇಳಬೇಕೆಂದಿದ್ದರು. ದುಃಖವು ಒತ್ತಡಿಸಿದ್ದರಿಂದ ಸುಮ್ಮನೆ ಮಾಧವಾಚಾರಿಯ ಕಡೆ ಒಂದು ದೃಷ್ಟಿ ಬೀರಿ, ಸೀರೆಯ ಸೆರಗನ್ನು ಕಣ್ಣಿಗೆ ಹಚ್ಚಿಕೊಂಡರು

ಬಸ್ ಸ್ಟಾಂಡಿನಲ್ಲಿದ್ದ ಕೂಲಿಯವನ ತಲೆಯಮೇಲೆ ಹಾಸಿಗೆ ಸುರಳಿ, ಟ್ರಂಕ್ ಹೇರಿದ್ದಾಯಿತು. ಮಾಧವಾಚಾರಿ, ಶ್ರೀನಿವಾಸಾಚಾರಿ, ಸೀತಾಬಾಯಿ, ಮತ್ತು ರಾಧೆ ಈ ರೀತಿ ಕ್ರಮವಾಗಿ ಎಲ್ಲರೂ ಸಾಗಿದರು. ಬಸ್ ಸ್ಟಾಂಡಿನಿಂದ ವೆಂಕೋಬಾಚಾರಿಯ ಮನೆ ಕೇವಲ ಒಂದೂವರೆ ಫರ್ಲಾಂಗ್

ದೂರದಲ್ಲಿದೆ. ಕೋಟೆಯು ಅರಳಿಮರವನ್ನು ದಾಟಿದರೆ ಅವರ ಮನೆ ಸಿಕ್ಕುತ್ತೆ.

ಬೀಗಮಂಡಲಿಗಾಗಿ ವೆಂಕೋಬಾಚಾರಿ ತನ್ನ ಮನೆಯ ಕಟ್ಟೆಯಮೇಲೆ ಶತಪಥ ಹಾಕುತ್ತ ಕಾಯುತ್ತಿದ್ದ. ಬೀಗರು ಊಟದ ಹೊತ್ತಿಗೆ ಬಂದರೂ ಮನೆಯಲ್ಲಿ ಊಟ ಮಾಡುವ ಅಥವಾ ತಿಂಡಿ ತಿನ್ನುವುದಿಲ್ಲವೆಂದು ಅವನಿಗೆ ಗೊತ್ತಿತ್ತು. ಮದುವೆಗೆ ಮಾತುಕತೆ ನಡೆಸಲು ಬರುವ ಗಂಡಿನ ಕಡೆಯವ ರಾಗಲಿ ಹೆಣ್ಣಿನ ಕಡೆಯವರಾಗಲಿ ಊಟ ಮಾಡುವ ಅಥವಾ ತಿಂಡಿ ತಿನ್ನುವ ರೂಢಿ ಇಲ್ಲ. ಈ ಕಾರಣದಿಂದ ಶ್ರೀನಿವಾಸಾಚಾರಿ ಊಟದ ಶಾಸ್ತ್ರವನ್ನು ಮುಗಿಸಿಕೊಂಡು ನ್ಯಾಮತಿಯಿಂದ ಹೊರಟಿದ್ದ.

ಮನೆಯ ಹಜಾರದಲ್ಲೊಂದು ದೊಡ್ಡ ಹಳೆಯ ಜಮಖಾನೆ ಹಾಸಿತ್ತು. ವೆಂಕೋಬಾಚಾರಿಗೆ ಊರಿನಲ್ಲಿ ಆಪ್ತರೆನ್ನುವವರು ಯಾರೂ ಇಲ್ಲದಿದ್ದರೂ ನಾಲ್ಕೆಂಟು ಜನರನ್ನು ಕಲೆಹಾಕಿದ್ದ. ಕೆಲವರು ಅವನ ಒತ್ತಾಯದ ಮೇಲೆ ಬಂದು ಕುಳಿತಿದ್ದರು. ಇನ್ನು ಕೆಲವರು ಪ್ರಾಣೇಶನ ಹೆಂಡತಿ ಹೇಗೆ ಇರುವಳೆಂಬುದನ್ನು ನೋಡಲು ಬಂದಿದ್ದರು. ಆದರೆ ವೆಂಕೋಬಾಚಾರಿಯ ಮೇಲಿನ ಅಭಿಮಾನದಿಂದ ಒಂದು ಪ್ರಾಣಿಯೂ ಬಂದಿರಲಿಲ್ಲ.

ಜಮಖಾನೆಯ ಮೇಲೊಂದು ಹಳೆಯ ಕಾಲದ ಊದಿನ ಜಾಡಿ ಊದಿನ ಕಡ್ಡಿಗಳು ವಾಸನೆ ಬೀರುವುದಕ್ಕಿಂತ ಹೆಚ್ಚಾಗಿ ಹೊಗೆಯನ್ನು ಉಗುಳುತ್ತಿದ್ದವು ಸಂತೆಯಲ್ಲಿ ಎಲ್ಲೋ ಅಗ್ಗವಾಗಿ ಸಿಕ್ಕಿದ್ದನ್ನು ವೆಂಕೋಬಾಚಾರಿ ಎಷ್ಟು ವರ್ಷಗಳ ಹಿಂದೆ ತಂದು ಹಾಕಿದ್ದನೋ ಗೊತ್ತಿಲ್ಲ ಅವನ್ನೆಲ್ಲ ಒಲೆಗೆ ಹಾಕಿದ್ದರೆ ಒಂದು ಹಂಡೆ ನೀರು ಕಾಯಿಸಬಹುದಾಗಿತ್ತು ಗೋಡೆ ಯೊತ್ತಿಗೆ ಒಂದು ಒರಗು ದಿಂಬು ಹಾಕಿದ್ದರು. ಮನೆಯನ್ನು ಚೊಕ್ಕಟ ವಾಗಿ ಗುಡಿಸಿದ್ದರಿಂದ, ಏನೋ ಒಂದು ತರಹ ಅಪೂರ್ವ ವರ್ಚಸ್ಸು ಉಕ್ಕು ತ್ತಿದ್ದಂತೆ ತೋರಿತು.

ಶ್ರೀನಿವಾಸಾಚಾರಿಯ ಪರಿಚಯವನ್ನು ವೆಂಕೋಬಾಚಾರಿಗೆ ಮಾಧವಾ ಚಾರಿ ಮಾಡಿಕೊಟ್ಟ. ಇಬ್ಬರೂ ತಮತಮಗಿರುವ ಹಳೆಯ ಸಂಬಂಧ ಗಳನ್ನು—ದೂರದ ಸಂಬಂಧಗಳನ್ನು—ಹೇಳಿದರು. ಈ ಸಂಬಂಧ ಹೊಸ

ದಲ್ಲವೆಂದೂ, ಇದೂ ಹಳೆಯದೇ ಎಂದೂ ಒಕ್ಕೊರಲಿನಿಂದ ಹೇಳಿದರು. ಹೊನ್ನಾಳಿಗೂ, ನ್ಯಾಮತಿಗೂ ಕೇವಲ ಒಂಭತ್ತು ಮೈಲಿ ದೂರವಿದ್ದರೂ ಉಭಯತ್ರರ ಪರಿಚಯ ಅಷ್ಟಾಗಿ ಮೊದಲಿನಿಂದಲೂ ಇಲ್ಲದ ಬಗ್ಗೆ ಕಾರಣ ಗಳನ್ನು ಹುಡುಕಾಡಿದರು

ಸೀತಾಬಾಯಿ ಮತ್ತು ರಾಧೆಯನ್ನು ವೆಂಕೂಬಾಯಿಯವರು ಒಳಕ್ಕೆ ಕರೆದುಕೊಂಡು ನಡುಮನೆಯಲ್ಲಿ ಹಾಸಿದ್ದ ಚಾಪೆಯ ಮೇಲೆ ಕುಳ್ಳಿರಿಸಿದರು. ತನ್ನ ಭಾವೀ ಸೊಸೆಯನ್ನು ನೋಡಿ ವೆಂಕೂಬಾಯಿಯವರ ಮುಖಕಮಲ ಹಿಗ್ಗಿತು. ತನ್ನ ಕಷ್ಟ ನೀಗುವ ಸೊಸೆಯನ್ನೊಮ್ಮೆ ಆರ್ತದೃಷ್ಟಿಯಿಂದ ನೋಡಿದರು. ತಮ್ಮ ಮನೆಯ ಭಾಗ್ಯಲಕ್ಷ್ಮಿಯೇ ಈಕೆಯೆಂದು ಅಂದು ಕೊಂಡರು.

ಸೀತಾಬಾಯಿಯವರಿಗೆ ಒಳದಿಗಿಲು ಇದ್ದೇ ಇದ್ದಿತು. ಎಲ್ಲಿ ತಮ್ಮ ಬಡತನ ಪತ್ತೆಯಾಗಿ ಮದುವೆಗೆ ವಿಘ್ನ ಬಂದೀತೋ ಎಂದು ಬಾಯಲ್ಲಿ ಅಕ್ಕಿ ಕಾಳು ಹಾಕಿಕೊಂಡಿದ್ದರು. ಇಂಥ ಅನುಕೂಲಸ್ಥರ ಮನೆ ತಮ್ಮ ಮಗಳಿಗೆ ದೊರಕಲೆಂದು ಹಲವು ದೇವರಿಗೆ ಹರಕೆ ತೊಟ್ಟಿದ್ದರು.

ಬಸ್ ಸ್ಟಾಂಡಿನಿಂದ ಮಾಧವಾಚಾರಿ ಮಾತಿಗಾರಂಭಿಸಿದವನು ಇನ್ನೂ ನಿಲ್ಲಿಸಿಯೇ ಇರಲಿಲ್ಲ, ನಿಲ್ಲಿಸುವ ಸೂಚನೆಯೂ ಇರಲಿಲ್ಲ. ಮದುವೆಗೆ ಮುಖ್ಯ ಆಧಾರ ಬರಿಮಾತು ಎಂಬುದು ಅವನಿಗೆ ಗೊತ್ತಿತ್ತು. ಅವನ ಮಾತಿನ ಸರಣಿಯಿಂದ ಶ್ರೀನಿವಾಸಾಚಾರಿ ತುಂಬ ಅನುಕೂಲಸ್ಥನೆಂದೂ, ವರದಕ್ಷಿಣೆ, ವರೋಪಚಾರ ಯಾವುದೂ ಕಡಿಮೆ ಮಾಡುವವನಲ್ಲವೆಂದೂ ಹೇಳಿದ. ವೆಂಕೋಬಾಚಾರಿಯ ಬಾಯಲ್ಲಿ ನೀರೂರಿತು. ಮುದ್ದು ಸೊಸೆ ಯೊಂದಿಗೆ ಹಣದಗಂಟೂ ಬರುವುದೆಂದು ಹಿರಿ ಹಿರಿ ಹಿಗ್ಗಿದ.

"ಮೊದಲು ಬಂದ ಕೆಲಸ ಆಗಲಿ, ಆಮೇಲೆ ಮಾತು. ವರ-ಕನ್ಯೆ ಗಳ ಭೇಟಿಯಾಗಲಿ. ಈಗಿನ ಕಾಲದಂತೆ ಮೊದಲು ಅವರೊಪ್ಪಬೇಕು. ಅನಂತರ ಹಿರಿಯರಾದ ನಾವು ಉಳಿದ ಲೌಕಿಕ ವಿಚಾರಗಳನ್ನು ಮಾತ ನಾಡೋಣ" ಎಂದು ಮಾಧವಾಚಾರಿ ಹೇಳುತ್ತಾ "ಅತ್ತೆ, ಕನ್ಯಾಮಣಿ ಯನ್ನು ಕ ಸಿ'' ಎಂದು ಹೇಳಿದ.

ಹಜಾರದ ಎದುರಿಗಿದ್ದ ಕೋಣೆಯಲ್ಲಿ ಪ್ರಾಣೇಶನನ್ನು ಕೂಡಿಸಿದ್ದರು. ಬಾ ಎಂದು ಹೇಳುವವರೆಗೂ ಬರಕೂಡದೆಂದು ಅವನಿಗೆ ಕಟ್ಟಾಣತಿ ಕೊಡಲಾಗಿತ್ತು.

ರಾಧೆ ಮೆಲ್ಲಗೆ ಬಂದು ಮೂಲೆಯಲ್ಲಿ ಕುಳಿತಳು. ಮೊದಲೇ ಕತ್ತಲು ಮನೆ. ಅದರೊಳ್ಳೊಂದು ಮೂಲೆ. ತಾಯಿ ಹೇಳಿಕೊಟ್ಟಂತೆ ರಾಧೆ, ತನ್ನ ಮೊಳಕಾಲು ಸಂದಿಯಲ್ಲಿ ತಲೆ ಹಾಕಿ ಕುಳಿತುಕೊಂಡಳು. ಅವಳ ತಲೆಯ ತುದಿಯೊಂದೇ ಕಾಣುತ್ತಿತ್ತು.

ಮಾಧವಾಚಾರಿಯೇ ಸೂತ್ರಧಾರ. ಇರ್ಕಡೆಗಳವರು ಅವನು ಕುಣಿಸಿದಂತೆ ಕುಣಿಯಬೇಕಿತ್ತು. ಕ್ಷೇತ್ರವನ್ನು ಅಷ್ಟರಮಟ್ಟಿಗೆ ಹದಮಾಡಿದ್ದ. "ಕನ್ಯೆ ಬಂದಿದ್ದಾಯಿತು, ವರ ಬರಲಿ" ಎಂದು ಮಾಧವಾಚಾರಿ ಕೂಗಿದ. ಪ್ರಾಣೇಶ ಸಾಲಂಕೃತವಾಗಿದ್ದ. ತೀಡಿದ ಕಚ್ಚೆಪಂಚೆ, ಒಗೆದ ಟ್ವಿಲ್‌ಷರ್ಟ್, ಅದರ ಕಾಲರ್‌ಗಳು ನಾಯಿಕಿವಿಯಂತೆ ಜೋಲುಬಿದ್ದಿವೆ. ಒಗೆದ ಚೆಕ್ ಕೋಟ್ ಹಾಕಿದ್ದಾನೆ. ಮೊದಲೇ ಕೋಟು ಬಿಗಿಯಾಗಿದೆ. ಇದ್ದಬದ್ದ ಗುಂಡಿಗಳನ್ನೆಲ್ಲಾ ಹಾಕಿದ್ದಾನೆ. ಉಸಿರು ಬಿಟ್ಟರೆ ಕೋಟು "ಫಳೀರನೆ" ಒಡೆದು ಹೋಗುವಂತಿದೆ. ವೆಂಕೋಬಾಚಾರಿ ಹೇಳಿಕೊಟ್ಟದ್ದಂತೆ ಶ್ರೀನಿವಾಸಾಚಾರಿಗೂ, ಮಾಧವಾಚಾರಿಗೂ, ಪ್ರಾಣೇಶ ಕೈ ಮುಗಿದು ಒರಗುದಿಂಬಿನ ಬಳಿ ಕುಳಿತುಕೊಂಡ.

ಎಲ್ಲರೂ ಮಾತನಾಡದೆ ಸುಮ್ಮನಿದ್ದರು. ಮಾಧವಾಚಾರಿ ಮತ್ತೆ ನಾಯಕತ್ವ ವಹಿಸಿದ. "ಕನ್ಯಾರತ್ನವನ್ನು ಕಣ್ಣರಳಿಸಿ ನೋಡಪ್ಪ, ನೀರಲ್ಲಿ ಎಮ್ಮೆ ಮಲಗಿಸಿ ವ್ಯಾಪಾರ ಮಾಡಿದಂತಿರಬಾರದು. ಕಾಡಿ ಕೂಡಬೇಕೇ ಹೊರತು ಕೂಡಿ ಕಾಡಬಾರದು" ಎಂದು ಹೇಳಿದ.

ಸಾಮಾನ್ಯವಾಗಿ ಮದುವೆಗೆ ಸಂಬಂಧಪಟ್ಟ ಮಾತುಕತೆಗಳು ಜರುಗುತ್ತಿರುವಾಗ ಕೆಲವು ಹಿಡಿನುಡಿಗಳಿವೆ. ಅವನ್ನೇ ಎಲ್ಲರೂ ಬಳಸುತ್ತಿರುತ್ತಾರೆ. ಮದುವೆ ಸಂದರ್ಭದಲ್ಲಿ ಕೆಲವು ಹಾಸ್ಯ ಮಾತುಗಳನ್ನು ಬಳಸುತ್ತಾರೆ. ಅವನ್ನು ಎಲ್ಲರೂ ಕೇಳಿರುತ್ತಾರೆ, ವಿಧಿಯಿಲ್ಲದೆ ಎಲ್ಲರೂ ನಗುತ್ತಿರುತ್ತಾರೆ.

"ಹುಡುಗಿ ಹಾಡು ಹೇಳುತ್ತಾಳೆಯೇ ?" ಮಾಧವಾಚಾರಿ ಕೇಳಿದ.

"ಹೇಳುತ್ತಾಳೆ. ಹಾರ್ಮೋನಿಯಂ, ಪಿಟೀಲು ಇವನ್ನು ಹೇಳಿಸಿಲ್ಲ.

ಆದರೆ ದೇವರನಾಮ, ಉರುಟಣೆ, ಆರತಿ ಹಾಡುಗಳನ್ನು ಹೇಳುತ್ತಾಳೆ. ಎಷ್ಟೇ ಆಗಲಿ ಹಳ್ಳಿಯಲ್ಲಿ ಬೆಳೆದ ಹುಡುಗಿ ........ ” ಸೀತಾಬಾಯಿಯವರು ಹಜಾರದಿಂದ ಅಶರೀರವಾಣಿಯೋಪಾದಿಯಲ್ಲಿ ಹೇಳಿದರು.

“ ಹಾಗಾದರೆ ಹೇಳಮ್ಮ, ಒಂದು ಒಳ್ಳೆಯ ಹಾಡನ್ನು ” ಮಾಧವಾಚಾರಿ ಹೇಳಿದ.

ರಾಧೆ ಎರಡು ಹಾಡನ್ನು ಹೇಳಿದಳು—ದೇವರನಾಮಗಳನ್ನು. ಕಂಠ ಸುಶ್ರಾವ್ಯವಾಗಿತ್ತು. ಆದರೆ ರಾಗ ಲಯಗಳ ಕಟ್ಟುನಿಟ್ಟುಗಳಾವನ್ನೂ ಆಕೆ ಅನುಸರಿಸಿರಲಿಲ್ಲ. ತಾಯಿ ಯಾವುದೋ ಕಾಲಕ್ಕೆ ಹೇಳಿಕೊಟ್ಟ ಹಾಡುಗಳವು. ಆ ಹಾಡುಗಳು ಚೆನ್ನಾಗಿವೆಯೆ ಅಥವಾ ಇಲ್ಲವೆ ಎಂದು ವಿಮರ್ಶಿಸುವ ಶಕ್ತಿ ಆ ರಸಿಕವೃಂದದಲ್ಲಿ ಯಾರಿಗೂ ಇರಲಿಲ್ಲ. ಸಂಪ್ರದಾಯಕ್ಕನುಗುಣವಾಗಿ ಎರಡು ಹಾಡು ಹೇಳಿಸಬೇಕು ಹೇಳಿದರೆ ತೀರಿತು. ಹುಡುಗಿಗೆ ಹಾಡಲು ಬರುತ್ತದೆ ಎಂಬ ಅಂಶ ವೆಂಕೂಬಾಯಿಯವರಿಗೆ ತಿಳಿದೊಡನೆ ಅವರ ಸಂತೋಷ ಇಮ್ಮಡಿಸಿತು.

“ಈಗಿನ ಕಾಲದ ಒಂದು ಹಾಡು ಹೇಳಮ್ಮ. ಸಿನಿಮಾ, ನಾಟಕದಲ್ಲಿನ ಯಾವುದಾದರೂ ಒಂದು ಮಟ್ಟು ಹೇಳು.” ಮಾಧವಾಚಾರಿ ಮಾತು ಸಾಗಿಸಿದ.

ರಾಧೆಗೆ ದಿಕ್ಕು ತೋಚದಾಯಿತು. ಯಾವಾಗಲೋ ಒಂದು ಸಾರಿ ರಾಮಪುರದ ಜಾತ್ರೆಗೆ ಹೋದಾಗ ಒಂದು ಸಿನಿಮಾ, (ಅದೂ ಟೂರಿಂಗ್ ಟಾಕೀಸಿನಲ್ಲಿ) ಒಂದು ನಾಟಕ ನೋಡಿದ್ದಳು. ಅವಳು ನೋಡಿದ ದೊಡ್ಡ ಊರೆಂದರೆ, ಶಿವಮೊಗ್ಗ. ಅದು ಈಗಾಗಲೇ ಐದು–ಆರು ವರ್ಷದ ಮಾತು. ಆದರೂ ಹುಡುಗಿ ಧೃತಿಕೆಡಲಿಲ್ಲ. ಪಕ್ಕದಮನೆ ಗೌಡರು ಒಂದು ಗ್ರಾಮಾಫೋನ್ ತರಿಸಿದ್ದರು. ಬೆಳಗಿನಿಂದ ಸಂಜೆಯವರೆಗೆ ರೆಕಾರ್ಡುಗಳನ್ನು ಹಾಕುತ್ತಿದ್ದರು. ಆದರ ಹಾಡುಗಳು ರಾಧೆಗೇ ಏಕೆ, ಇಡೀ ಊರಿನವರ ಬಾಯಿಗೆ ಬರುತ್ತಿದ್ದವು. ರಾಧೆ ಹೇಳಿದಳು. “ಪ್ರಾಣೇಶನೇ ಪೋಗಬೇಡವೋ ಬೇಡಿಕೊಂಬೆನಾ” ಎಲ್ಲರೂ ಘೊಳ್ಳೆಂದು ನಕ್ಕರು. ತನ್ನ ಭಾವಿ ಪತಿಯ ಹೆಸರು ಪ್ರಾಣೇಶ ಎನ್ನುವುದು ರಾಧೆಗೆ ಅರಿವಾಗಲಿಲ್ಲ. ಅಕಸ್ಮಾತ್ತಾಗಿ ಹಾಡಿನಲ್ಲಿ

ಶಬ್ದ ಪ್ರಯೋಗವಾಗಿದ್ದರೆ ಅವಳಾದರೂ ಏನು ಮಾಡಿಯಾಳು ? ಎಂದೂ ನಗದ ಪ್ರಾಣೇಶನ ಮುಖಾರವಿಂದದಿಂದ ಸಹ ನಗೆಮಲ್ಲಿಗೆ ಸೂಸಿತು.

"ಪ್ರಾಣೇಶ, ರಾಧೆ ನಿನ್ನನ್ನೇ ಮದುವೆಯಾಗಲು ಎಷ್ಟು ಆಸೆ ಪಟ್ಟು ಕೊಂಡಿದ್ದಾಳೆ. ನೀನೆಲ್ಲಿಯಾದರೂ ಕೈ ಬಿಟ್ಟೀಯೆಂದು ಹಾಡಿನಲ್ಲಿ ಬೇಡಿ ಕೊಂಡಿದ್ದಾಳೆ. ನಿಜಕ್ಕೂ ರಾಧೆ ಜಾಣೆ. ಒಳ್ಳೆಯ ಹಾಡನ್ನೇ ಆರಿಸಿ ಹೇಳಿದ್ದಾಳೆ. ಇರಬೇಕು ಜೊತೆ ಎಂದರೆ ಹೀಗೆ. ಬಂಗಾರದಲ್ಲಿ ವಜ್ರವನ್ನು ಕೂಡಿಸಿದಂತಿದೆ ಹಾಲಿಗೆ ಸಕ್ಕರೆ ಬೆರಸಿದಂತಿದೆ. ಇದಕ್ಕಿಂತ ಒಳ್ಳೆಯ ಸಂಬಂಧ ಪಾತಾಳಗಡಗ ಹಾಕಿ ಹುಡುಕಿದರೂ ಸಿಕ್ಕಲಾರದು..............." ಇಂಥ ಮಾತುಗಳನ್ನು ಬಳಸಲು ಮಾಧವಾಚಾರಿ ಕಾಯುತ್ತಿದ್ದ. ಅವನ ಎಣಿಕೆಯಂತೆಯೇ ಎಲ್ಲವೂ ನಡೆಯಲಾರಂಭಿಸಿದವು. "ಇನ್ನು ನೀನು ಒಳಕ್ಕೆ ಹೋಗಮ್ಮ" ರಾಧೆಗೆ ಹೇಳಿದ

ವೆಂಕೂಬಾಯಿಯವರು ಬಂದಿದ್ದ ಇಬ್ಬರು ಚಿಕ್ಕ ಹುಡುಗಿಯರ ಸಂಗಡ ಕಾಫಿ ಬಟ್ಟಲುಗಳನ್ನು ಕಳಿಸಿದರು. ಬಂದ ಅತಿಥಿಗಳು ಮತ್ತು ಬೀಗರು ಕಾಫಿ ಹೀರಿದರು. ಬಂದ ಜನ ಒಬ್ಬೊಬ್ಬರಾಗಿ ಹೊರಟರು ಔಪಚಾರಿಕ ವಾಗಿ, ಸಂಬಂಧ ಒಳ್ಳೆಯದೆಂದೂ, ಪ್ರಾಣೇಶನಿಗೆ ಅನುರೂಪಳಾದ ಕನ್ಯೆ ಸಿಕ್ಕಳೆಂದೂ ಎಲ್ಲರೂ ಹೇಳಿದರು

ಮದುವೆಯನ್ನು ನಿಶ್ಚಿತಗೊಳಿಸುವ ಸಂಧಿಕಾಲ ಈಗ ಪ್ರಾಪ್ತವಾಯಿತು. ಮಾಧವಾಚಾರಿ ತನ್ನ ಬತ್ತಳಿಕೆಯಲ್ಲಿರುವ ಅಸ್ತ್ರಗಳನ್ನೆಲ್ಲಾ ಪ್ರಯೋಗಿಸ ಬೇಕಾದ ಸಂದರ್ಭ ಒದಗಿತು. ವೆಂಕೋಬಾಚಾರಿಗೆ ಇದುವರೆಗೆ ನಡೆದ ನಾಟಕ ಯಾವುದೂ ಬೇಕಾಗಿರಲಿಲ್ಲ. ಅವನಿಗೆ ಬೇಕಾದ್ದು ಹಣ ಅದು ಬಂದರೆ ತೀರಿತು ಹೆಣ್ಣಿನ ಬಗ್ಗೆ ಅವನು ಯಾವ ಅಭಿಪ್ರಾಯಕ್ಕೂ ಬಂದಿ ರಲಿಲ್ಲ ಹೆಣ್ಣು ಎಂದರೆ ಹೆಣ್ಣು, ಅದರಲ್ಲಿ ವ್ಯತ್ಯಾಸವೇನು ಬಂತು–ಇದು ಅವನ ಖಚಿತ ಅಭಿಪ್ರಾಯ.

ಮಾಧವಾಚಾರಿ ಅತಿಮುಖ್ಯವಾದ ವಿಷಯ–ಹಣ–ಬಿಟ್ಟು ಉಳಿದೆಲ್ಲ ವಿಚಾರವಾಗಿ ಮಾತನಾಡುತ್ತಿರುವುದು ವೆಂಕೋಬಾಚಾರಿಗೆ ಸಿಟ್ಟು ತಂದಿತು. ಜನರೆಲ್ಲ ಹೊರಟುಹೋದೊಡನೆ ವೆಂಕೋಬಾಚಾರಿ ಹೇಳಿದ. "ಕನ್ಯೆಯನ್ನು ನಾನು ಒಪ್ಪಿದ್ದೇನೆ. ನನ್ನ ಹೆಂಡತಿ ಮತ್ತು ಮಗನ ಪರವಾಗಿ ನಾನೇ ಒಪ್ಪಿಗೆ

ಕೊಡುತ್ತೇನೆ ಕೊಡು-ಕೊಳ್ಳುವ ವಿಚಾರವಾಗಿ ಮಾತನಾಡೋಣ. ನಿಮ್ಮ ಷರತ್ತುಗಳು ನನಗೆ ಒಪ್ಪಿಗೆಯಾದರೆ ಸರಿ, ಇಲ್ಲವಾದರೆ ನೀವು ಬೇರೆ ಕಡೆ ನೋಡಿಕೊಳ್ಳಿ. ಪ್ರಾಣೇಶನಿಗೆ ಅನೇಕ ಒಳ್ಳೆಯ ಸಂಬಂಧಗಳು ಬಂದಿದ್ದವು. ಇನ್ನೂ ಹೆಚ್ಚಿನ ಒಳ್ಳೆಯ ಸಂಬಂಧ ಬರಲೆಂದು ನಾನು ಅವನ್ನೆಲ್ಲಾ ಕೈ ಬಿಟ್ಟಿದ್ದೆ. ನನ್ನ ಅಂತಸ್ತಿಗೆ ತಕ್ಕಂತೆ ಹುಡುಗನಿಗೆ ವರದಕ್ಷಿಣೆ ವರೋಪಚಾರ ಗಳು ಸಲ್ಲಬೇಕು.... ..."

ಶ್ರೀನಿವಾಸಾಚಾರಿ ಮಧ್ಯೆ ಬಾಯಿ ಹಾಕಿ ಮಾತನಾಡಲೆತ್ನಿಸಿದ. ಮಾಧವಾಚಾರಿ ಅವಕಾಶ ಕೊಡಲಿಲ್ಲ. ಎಲ್ಲಿಯಾದರೂ ಬೆಪ್ಪು ಬೆಪ್ಪಾಗಿ ಮಾತನಾಡಿದರೆ ಎಲ್ಲವೂ ಹದಗೆಟ್ಟುಹೋಗುವುದೆಂದು ಅವನಿಗೆ ಗೊತ್ತು. ಇದರಲ್ಲಿ ಒಂದು ಸ್ವಾರಸ್ಯ ಅಂಶವಿದೆ. ಏನೆಂದರೆ ವೆಂಕೋಬಾಚಾರಿಗೂ ಶ್ರೀನಿವಾಸಾಚಾರಿಗೂ ಅಜಗಜಾಂತರ ವ್ಯತ್ಯಾಸ ಶ್ರೀನಿವಾಸಾಚಾರಿ ಬಾಳಿ ಕೆಟ್ಟವನು. ವೆಂಕೋಬಾಚಾರಿ ಕೆಟ್ಟು ಬಾಳಿದವನು. ಶ್ರೀನಿವಾಸಾಚಾರಿಗೆ ಇನ್ನೂ ದಯೆ, ದಾಕ್ಷಿಣ್ಯ, ಕರುಣೆ ಮುಂತಾದ ಕೆಲವು ಉಚ್ಚಗುಣಗಳಿದ್ದವು. ಬಡತನದ ಬೇಗೆಯಿಂದ ಹಣ್ಣಾಗಿದ್ದ. ಪರಿಸ್ಥಿತಿಗಳ ಸಂಕೋಲೆಗಳಿಗೆ ಸಿಕ್ಕಿ ಬಿದ್ದಿದ್ದ. ಮನಸ್ಸಿಲ್ಲದೆ, ಅನಿವಾರ್ಯವಾಗಿ ಸುಳ್ಳು ಹೇಳುವ ಮತ್ತು ಮೋಸ ಮಾಡುವ ಪರಿಸ್ಥಿತಿ ಅವನ ಹೆಗಲೇರಿತ್ತು. ಸಂಸಾರ ನಿರ್ವಹಣೆಗಾಗಿ ಅವನು ಪಂಚಮಹಾಪಾತಕಗಳನ್ನು ಮಾಡಲು ಸಹ ಹೇಸುತ್ತಿದ್ದಿಲ್ಲ. ಪಾಪ ಪುಣ್ಯಗಳ ಅರಿವು ಅವನಿಗಿತ್ತು. ತಾನು ಮಾಡುತ್ತಿರುವುದು ತಪ್ಪೆಂದು ಅವನಿಗೆ ತಿಳಿದಿತ್ತು. ಆದರೆ ಪರಿಸ್ಥಿತಿಯ ಮುಂದೆ ಅವನ ಆಟ ಸಾಗುವ ಹಾಗಿರಲಿಲ್ಲ. ವೆಂಕೋಬಾಚಾರಿಗೆ ಹಣದ ದಾಹ ಹತ್ತಿತ್ತು. ಆ ದಾಹ ಈ ಜನ್ಮಕ್ಕೆ ತಣಿಯುವ ಹಾಗಿರಲಿಲ್ಲ. ನ್ಯಾಯಾನ್ಯಾಯಗಳ ವಿಮರ್ಶೆ ಮಾಡುವ ಚೇತನವನ್ನು ಅವನ ಮನಸ್ಸು ಎಂದೋ ಕಳೆದುಕೊಂಡಿತ್ತು. ಹಣ ಸಂಪಾದಿಸುವ ಭರದಲ್ಲಿ ಅವನು ಯಾರನ್ನು ಬೇಕಾದರೂ ಬಲಿ ಕೊಡಲು ಸಿದ್ಧನಿದ್ದ. ಚಿಕ್ಕಂದಿನಿಂದಲೂ ದಾರಿದ್ರ್ಯದಲ್ಲಿ ಬೆಳೆದವನಾಗಿದ್ದರಿಂದ ದೊಡ್ಡಸ್ತಿಕೆಎಂಬುದು ಏನೆಂದು ಅವನಿಗೆ ಗೊತ್ತಿರಲಿಲ್ಲ ಈ ಮುದಿವಯಸ್ಸಿನಲ್ಲಿ ಅದನ್ನು ತಿಳಿದು ಕೊಳ್ಳುವ ಅಥವಾ ಅರ್ಥಮಾಡಿಕೊಳ್ಳುವ ಹವ್ಯಾಸಕ್ಕೆ ಅವನು ಬೀಳಲು ಸಿದ್ಧನಾಗಿರಲಿಲ್ಲ.

"ವೆಂಕೋಬಾಚಾರ್‍ರೇ, ನಿಮ್ಮ ಮರ್ಯಾದೆಗೆ ತಕ್ಕಂತೆ ಶ್ರೀನಿವಾಸಾಚಾರ್‍ಯರು ನಡೆದುಕೊಳ್ಳಲು ಸಿದ್ಧರಿದ್ದಾರೆ. ಅವರೂ ಮಕ್ಕಳೊಂದಿಗರು. ರಾಧೆಯ ಮದುವೆಯೊಂದಾದರೆ ತೀರಲಿಲ್ಲ, ಇನ್ನೂ ಜವಾಬ್ದಾರಿಗಳಿವೆ ಪ್ರಾಣೇಶನಿಗೆ ವರದಕ್ಷಿಣೆ ಮತ್ತು ವರೋಪಚಾರ ಎರಡೂ ಕೂಡಿ ನಿಮಗೆ ಒಂದು ಸಾವಿರ ರೂಪಾಯಿ ಕೊಡಿಸುತ್ತೇನೆ. ಮದುವೆ ಇದೇ ಶ್ರಾವಣದಲ್ಲಿ ನಡೆದುಹೋಗಲಿ. ಹೇಗೂ ರಾಯರ ಮಠದಲ್ಲಿ ಆರಾಧನೆಯಾಗುತ್ತದೆ. ಆಗಲೇ ಮದುವೆಯನ್ನು ತೀರಿಸಿಬಿಡೋಣ. ಸುಮ್ಮನೆ ಜನಗಳನ್ನು ಕಲೆ ಹಾಕಿ ತಿನ್ನಿಸಿದರೆ ಏನು ಪ್ರಯೋಜನ. ಹುಡುಗಿಗೆ ವಸ್ತ್ರ ಒಡವೆ, ಬಟ್ಟೆ ಬರೆ ನಿಮಗೆ ತಿಳಿದದ್ದು ಹಾಕಿ. ಹುಡುಗಿ ನಿಮ್ಮ ವಸ್ತು, ನಿಮ್ಮ ಮಗಳು ಸಮಾನ, ಅವಳು ಭೂಷಣವಾಗಿದ್ದರೆ ನಿಮಗೂ ಭೂಷಣ" ಮಾಧವಾಚಾರಿ ಒಂದೇ ಉಸುರಿನಲ್ಲಿ ಹೇಳಿದ.

ವೆಂಕೋಬಾಚಾರಿ ಮನಸ್ಸಿನಲ್ಲಿಯೇ ಗುಣಾಕಾರ ಭಾಗಾಕಾರಗಳನ್ನು ಹಾಕಿದ. ಒಂದು ಸಾವಿರಕ್ಕಂತೂ ಶ್ರೀನಿವಾಸಾಚಾರಿ ಒಪ್ಪಿದ್ದಾನೆ. ಆಮೇಲೆ ನಿಷೇಕ, ಬಸಿರು, ಬಾಣಂತನಗಳಲ್ಲಿ ಸ್ವಲ್ಪ ಸ್ವಲ್ಪ ಹಿರಿದರಾಯಿತು. ಮೇಲಾಗಿ ಕಂಡುಂಡ ಜನ. ಹುಡುಗಿಯನ್ನು ಕರೆಯಿಸಲು ಮತ್ತು ಕಳಿಸಲು ಸ್ವಲ್ಪ ಹಣದಲ್ಲಿಯೇ ಮುಗಿಸಬಹುದು. ಕನ್ಯೆ ತಕ್ಕಮಟ್ಟಿಗೆ ಇದ್ದಾಳೆ. ತೀರ ತೆಗೆದುಹಾಕುವ ಹಾಗಿಲ್ಲ ಮತ್ತು ಹೇಳಿಕೊಳ್ಳುವ ಹಾಗಿಲ್ಲ. ಪ್ರಾಣೇಶನ ಯೋಗ್ಯತೆಗೆ ಸಾಕು.

"ಮಾಧವಾಚಾರ್‍ರೆ, ನಿಮ್ಮ ಮಾತು ತೆಗೆದುಹಾಕುವ, ಅಥವಾ ಇದಿರು ಹೇಳುವ ಯೋಚನೆ ನಮಗಿಲ್ಲ. ಎಲ್ಲ ಭಾರ ನಿಮಗೆ ಸೇರಿದ್ದು. ನೀವು ಹೇಳಿದಂತೆ ವರದಕ್ಷಿಣೆ, ವರೋಪಚಾರಗಳಿಗೆ ಒಂದು ಸಾವಿರ ಕೊಡಿಸಿಬಿಡಿ. ಮದುವೆಮನೆ ಎಂದರೆ ಬಟ್ಟೆ ಭೂಷಣ, ಅದನ್ನು ಮರೆಯಬೇಡಿ. ಹುಡುಗನ ಡ್ರೆಸ್ ವಿಚಾರ ನೋಡಿಕೊಳ್ಳಿ. ನಾವು ಹಳೆಯಕಾಲದವರು, ಸೂಟು ಬೂಟಿನವರಲ್ಲ. ಒಂದು ಜೊತೆ ಜರತಾರೀ ಪಂಚೆ, ಉತ್ತರೀಯ ಕೋಟು ಷರ್ಟುಗಳಾದರೆ ಸಾಕು." ವೆಂಕೋಬಾಚಾರಿ ಇನ್ನೂ ಏನನ್ನೋ ಪಟ್ಟಿಯಲ್ಲಿ ಸೇರಿಸಬೇಕೆಂದಿದ್ದವನು ಅಲ್ಲಿಗೇ ನಿಲ್ಲಿಸಿದ.

"ವೆಂಕೋಬಾಚಾರ್ರೆ, ಮದುವೆ ಎಂದರೆ ಹತ್ತು ಹೆಚ್ಚು, ಹತ್ತು ಕಡಿಮೆ. ತೀರ ಚೌಕಾಸಿ ಮಾಡುತ್ತಾ ಕೂತರೆ ಆಗುವುದಿಲ್ಲ. ಮುಖ್ಯ ಕೆಲಸ ನಡೆಯಬೇಕು. ಸಂಬಂಧ ಬೆಳೆಯಬೇಕು. ಇದು ಒಂದು ದಿನದ ಮಾತಲ್ಲ. ಕಡೆಯವರೆಗೂ ಉಭಯತ್ರರು ಸರಿಯಾಗಿ ನಡೆದುಕೊಳ್ಳಬೇಕು.'' ಮಾಧವಾಚಾರಿ ಪ್ರತಿಮಾತಿನ ಸಂದರ್ಭದಲ್ಲೂ ವೆಂಕೋಬಾಚಾರಿ ನುಣುಚಿಕೊಳ್ಳದಂತೆ ಪಟ್ಟುಗಳನ್ನು ಬಿಗಿಪಡಿಸಿದ.

ಮದುವೆಯನ್ನು ಶ್ರಾವಣ ಮಾಸಕ್ಕೆ ನಿಷ್ಕರ್ಷೆ ಮಾಡಿದ್ದಾಯಿತು. ಮದುವೆಗೆ ಯಾವ ದಿನ ಬೀಗರು ಹೊರಟು ಬರಬೇಕು, ಅವರನ್ನು ಋಲ್ಲಿ ಬಿಡಾರ ಮಾಡಿಸಬೇಕು ಮುಂತಾದವೂ ಗೊತ್ತುಮಾಡಲ್ಪಟ್ಟವು. ಎಲ್ಲ ವಿಚಾರಗಳ ಬಗ್ಗೆಯೂ ಒಂದು ತರಹೆ ಒಮ್ಮತ ಕಾಣುತ್ತಿತ್ತು. ಮಾಧವಾಚಾರಿಯು ಶ್ರೀನಿವಾಸಾಚಾರಿ, ಸೀತಾಬಾಯಿ ಮತ್ತು ರಾಧೆ ಇವರನ್ನು ತನ್ನ ಮನೆಗೆ ಕರಡುಕೊಂಡು ಹೋದ. ಮಧ್ಯಾಹ್ನ ಅವರಿಗೆಲ್ಲ ಉಪ್ಪಿಟ್ಟು ಕಾಫೀ ಸಮಾರಾಧನೆ ಮಾಡಿಸಿದ್ದ.

ಶ್ರೀನಿವಾಸಾಚಾರಿ ದಿಙ್ಮೂಢನಾದ. ಮಾಧವಾಚಾರಿ ಅತ್ಯಂತ ಚಾಕಚಕ್ಯದಿಂದ ವೆಂಕೋಬಾಚಾರಿಯಂಥ ಹುಲಿಯನ್ನು ಬಾವಿಯಲ್ಲಿ ಬೀಳುವಂತೆ ಮಾಡಿದ್ದ. ಆದರೆ ಒಂದು ಸಾವಿರ ರೂಪಾಯಿಗಳನ್ನು ಒದಗಿಸುವುದು ಹೇಗೆಂಬುದು ಅವನಿಗೆ ತಿಳಿಯದಾಯಿತು. ಈ ವಿಚಾರವಾಗಿ ಮಾಧವಾಚಾರಿಯನ್ನು ಕೇಳಿದ ''ನಿನಗೆ ಎಷ್ಟು ತರಲು ಸಾಧ್ಯವಾಗುತ್ತದೋ ಅಷ್ಟನ್ನು ತೆಗೆದುಕೊಂಡು ಬಾ, ಹೆಚ್ಚು ಕಡಿಮೆ ಆದದ್ದನ್ನು ನಾನು ಸರಿ ಮಾಡುತ್ತೇನೆ. ನಾನಿರುವಾಗ ನೀನೇಕೆ ಯೋಚನೆ ಮಾಡುತ್ತೀ ?'' ಮಾಧವಾಚಾರಿ ಆತ್ಮವಿಶ್ವಾಸದಿಂದ ಹೇಳಿದ. ಅಂದೇ ಸಂಜೆ ನಾಲ್ಕು ಗಂಟೆ ಬಸ್ಸಿಗೆ ಶ್ರೀನಿವಾಸಾಚಾರಿ ಮತ್ತು ಅವನ ಕುಟುಂಬದವರು ನ್ಯಾಮತಿಗೆ ಪ್ರಯಾಣ ಮಾಡಿದರು.

* * *

ಶ್ರೀನಿವಾಸಾಚಾರಿಯ ಮೂರು ಜನ ತಮ್ಮಂದಿರು ತಾವು ವಾಗ್ದಾನ ಮಾಡಿದಂತೆ ಮದುವೆ ಮುಹೂರ್ತ ಸಮೀಪಿಸುವ ಹೊತ್ತಿಗೆ ತಲಾ ನೂರು

ರೂಪಾಯಿಗಳಂತೆ ಮುನ್ನೂರು ರೂಪಾಯಿಗಳನ್ನು ಕಳಿಸಿದರು. ಶ್ರೀನಿವಾಸಾಚಾರಿಯು ಹಳ್ಳಿಗಳ ಮೇಲೆ ಹೋಗಿ "ದೇವರಾಣೆಯಾಗಿಯೂ ಮದುವೆ ಮಾಡುತ್ತೇನೆ ಪಟ್ಟಿ ಕೊಡಿ" ಎಂತ ಹೇಳಿ ಇನ್ನೂರು ರೂಪಾಯಿಗಳನ್ನು ವಸೂಲು ಮಾಡಿಕೊಂಡು ಬಂದ. ಹಳ್ಳಿಗರಿಂದ ಬರಬೇಕಾಗಿದ್ದ ಕೇಸುಗಳ ಮೇಲಿನ - ನ್ಯಾಯವಾದ ಮತ್ತು ಅನ್ಯಾಯವಾದ - ಬಾಕಿ ಹಣವನ್ನು ವಸೂಲು ಮಾಡಿಕೊಂಡು ಬಂದ. ಕೂಡಲೇ ಮಾಧವಾಚಾರಿಗೆ ಹೇಳಿಕಳುಹಿಸಿದ

ಶ್ರೀನಿವಾಸಾಚಾರಿ ಆರು ನೂರು ರೂಪಾಯಿಗಳನ್ನು ವಸೂಲು ಮಾಡಿದ್ದಾನೆಂಬ ಅಂಶ ಕೇಳಿ ಮಾಧವಾಚಾರಿಗೆ ಆಶ್ಚರ್ಯವೂ, ಸಂತೋಷವೂ ಉಂಟಾಯಿತು. ಮದುವೆಯನ್ನು ಸುಸೂತ್ರವಾಗಿ ನೆರವೇರಿಸಿಕೊಡುವುದಾಗಿಯೂ, ಅದಕ್ಕೆ ಪ್ರತಿಫಲವಾಗಿ ತನಗೆ ಒಂಬು ನೂರು ರೂಪಾಯಿಗಳನ್ನು ಕೊಡಬೇಕೆಂದೂ ಹೇಳಿದ. ಶ್ರೀನಿವಾಸಾಚಾರಿ ಬಿಚ್ಚಿದೆಯಿಂದ ತನ್ನ ದಾರಿದ್ರ್ಯ, ಕಷ್ಟ ಕಾರ್ಪಣ್ಯಗಳನ್ನು ಹೇಳಿಕೊಂಡರೂ ಅವನ ಮನಸ್ಸು ಕರಗಲಿಲ್ಲ. ತಾನು ಮಾಡಿರುವ, ಮಾಡಲಿರುವ ಕೆಲಸಕ್ಕೆ ಈ ಹಣ ಅತ್ಯಲ್ಪವೆಂದೂ ಬೇರೆಯವರಾಗಿದ್ದರೆ ಇನ್ನೂ ಹೆಚ್ಚು ಹಣ ತಾನು ತೆಗೆದುಕೊಳ್ಳುತ್ತಿದ್ದುದಾಗಿಯೂ ಹೇಳಿದ. ಶ್ರೀನಿವಾಸಾಚಾರಿ ಅಡಕತ್ತರಿಯಲ್ಲಿ ಸಿಕ್ಕ ಅಡಕೆಯಂತಾದ. ಇಲ್ಲ ಎಂದರೆ ವರ ತಪ್ಪಿಹೋಗುತ್ತೆ, ಅಷ್ಟೆ ಅಲ್ಲ, ಈ ಜನ್ಮದಲ್ಲಿ ರಾಧೆ ಮದುವೆಯನ್ನು ಕಾಣುವುದಿಲ್ಲ. ಹ್ಞೂ ಎಂದರೆ ತನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಹಣವನ್ನು ತೆರಬೇಕಾಗಿದ್ದಿತು. ಗತ್ಯಂತರವಿಲ್ಲದೆ ಶ್ರೀನಿವಾಸಾಚಾರಿ ಒಪ್ಪಿ ನೂರು ರೂಪಾಯಿಗಳನ್ನು ಕೊಟ್ಟ. ಉಳಿದ ಐದು ನೂರು ರೂಪಾಯಿಗಳಲ್ಲಿ ಮದುವೆಯನ್ನು ಸಾಂಗಮಾಡಿಸುವುದಾಗಿ ಮಾಧವಾಚಾರಿ ಅಭಯ ವಚನ ನೀಡಿದ. ಈ ಪವಾಡವನ್ನು ಅವನು ಹೇಗೆ ಸಾಧಿಸಬಲ್ಲನೆಂಬುದು ಶ್ರೀನಿವಾಸಾಚಾರಿಗೆ ತಿಳಿದಿರಲಿಲ್ಲ. ಆದರೂ ಕದೀಮ ಮಾಧವಾಚಾರಿಗೆ ಯಾವುದೂ ದುಸ್ಸಾಧ್ಯವಿಲ್ಲವೆಂಬುದು ಅವನಿಗೆ ತಿಳಿದಿತ್ತು.

* * *

ಅಂತು, ರಾಘವೇಂದ್ರಸ್ವಾಮಿಗಳ ಸನ್ನಿಧಿಯಲ್ಲಿ ಪ್ರಾಣೇಶ ರಾಧೆಯು ಕೈಹಿಡಿದ. ಮಾಧವಾಚಾರಿ ವೆಂಕೋಬಾಚಾರಿಯಿಂದಲೂ ನೂರು ರೂಪಾಯಿ ಕಿತ್ತಿದ್ದ. ಶ್ರೀನಿವಾಸಾಚಾರಿಯಿಂದ ಐದು ನೂರು ರೂಪಾಯಿಗಳನ್ನು ವೆಂಕೋಬಾಚಾರಿಗೆ ಕೊಡಿಸಿ, ಉಳಿದ ಐದು ನೂರು ರೂಪಾಯಿಗಳನ್ನು ಹುಡುಗನ ನಿಷೇಕದ ವೇಳೆಗೆ ಕೊಡುವುದಾಗಿ ಗೊತ್ತಾಗಿತ್ತು. ವೆಂಕೋಬಾಚಾರಿ ಈ ಹೊಸ ಕರಾರಿಗೆ ಒಪ್ಪಲು ಸಿದ್ಧನಾಗಿರಲಿಲ್ಲ. ಆದರೆ ಮಾಧವಾಚಾರಿಯ ಬೆಣ್ಣೆಯಂತಹ ಮಾತುಗಳೂ, ಪರಿಸ್ಥಿತಿಯೂ ಒಪ್ಪಿಕೊಳ್ಳುವಂತೆ ಮಾಡಿದ್ದವು. ವೆಂಕೂಬಾಯಿಯವರ ಒತ್ತಾಯವೂ ಹೆಚ್ಚಾಗಿತ್ತು. ಈ ಕಾರಣದಿಂದಲೇ ಮದುವೆ ಸಮಾರಂಭದಲ್ಲಿ ವೆಂಕೋಬಾಚಾರಿ ಉತ್ಸಾಹಶೂನ್ಯನಾಗಿದ್ದ. ನಿಷೇಕದ ವೇಳೆಗೆ ಬರತಕ್ಕ ಹಣ ಬಾರದಿದ್ದಲ್ಲಿ ನಿಷೇಕ ಮಾಡಿಕೊಳ್ಳುವುದನ್ನು ನಿಲ್ಲಿಸಬೇಕೆಂದು ಆಗಲೇ ಸ್ಥಿರಸಂಕಲ್ಪಿಸಿದ್ದ. ಮದುವೆಯ ಸಮಯದಲ್ಲಿ ಮಾಧವಾಚಾರಿ ಇರಲಿಲ್ಲ. ಯಾವುದೋ ಇನ್ನೊಂದು ಮದುವೆಯನ್ನು ತಾನು ಕುದರಿಸಬೇಕಾಗಿದೆಯೆಂದು ಹೇಳಿ ಕಂಬಿ ಕಿತ್ತಿದ್ದ.

* * *

ನಿಷೇಕದ ಪ್ರಸ್ತಾಪ ಬಂದಾಗ ವೆಂಕೋಬಾಚಾರಿಗೆ ವರದಕ್ಷಿಣೆಯ ಶಿಲ್ಕು ಇನ್ನೂ ತಲಪಿರಲಿಲ್ಲ. ಶ್ರೀನಿವಾಸಾಚಾರಿ ಒಂದಲ್ಲ ಹತ್ತು ಕಾಗದಗಳನ್ನು ಬರೆದ. ಅವೆಲ್ಲಕ್ಕೂ ವೆಂಕೋಬಾಚಾರಿಯದು ಒಂದೇ ಉತ್ತರ—ಹಣ. ಪರಿಸ್ಥಿತಿ ತೀರ ಉತ್ಕಟಕ್ಕೆ ಬಂದಿದ್ದರಿಂದ ಶ್ರೀನಿವಾಸಾಚಾರಿ ವಸ್ತುಸ್ಥಿತಿಯನ್ನೆಲ್ಲ ತಿಳಿಸಿ ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡ. ಈ ಒಂದು ಸಮಯ ಬಿಟ್ಟರೆ ತನಗೆ ಹಣ ಬರುವುದಿಲ್ಲವೆಂದು ವೆಂಕೋಬಾಚಾರಿಗೆ ಗೊತ್ತಿತ್ತು. ಆದ್ದರಿಂದಲೇ ತನ್ನ ಪಟ್ಟು ಬಲಪಡಿಸಲಾರಂಭಿಸಿದ. ಆದರೆ ಶ್ರೀನಿವಾಸಾಚಾರಿಗೆ ಎಷ್ಟು ಒತ್ತಾಯ ಹಾಕಿದರೂ ಅಷ್ಟೇ, ಅವನಲ್ಲಿ ಒಂದು ಕುರುಡು ಕಾಸೂ ಇಲ್ಲ. ಮತ್ತು ಈ ಮಧ್ಯದಲ್ಲಿ ಮಾಧವಾಚಾರಿ ತಲೆ ತಪ್ಪಿಸಿಕೊಳ್ಳಲಾರಂಭಿಸಿದ. ಮನೆಯಲ್ಲಿದ್ದರೂ ಇಲ್ಲವೆಂದು ಹೇಳಿಸುತ್ತಿದ್ದ. ಬೀದಿಯಲ್ಲಿ ಅಕಸ್ಮಾತ್ತಾಗಿ ಯಾವಾಗಲಾದರೂ ಸಿಕ್ಕರೆ "ಇಗೋ ಬಂದೆ, ಅಗೋ ಬಂದೆ'' ಎಂದು ಚಂಗು ಹೊಡೆದು ನುಣುಚಿಕೊಳ್ಳುತ್ತಿದ್ದ. ಕೆಲವು

ಜನ ದೊಡ್ಡ ಮನುಷ್ಯರನ್ನು ಕಲೆ ಹಾಕಿ ಪಂಚಾಯ್ತಿ ಹಾಕಿಸಲು ಶ್ರೀನಿವಾಸಾಚಾರಿ ಹವಣಿಸಿದ. ಆದರೆ ವೆಂಕೋಬಾಚಾರಿಯ ಸ್ವಭಾವವನ್ನು ಚೆನ್ನಾಗಿ ತಿಳಿದಿರುವ ಅವರು ಈ ವಿಚಾರದಲ್ಲಿ ಆಸಕ್ತಿ ತೋರಲು ಮುಂದೆ ಬರಲಿಲ್ಲ. ಶ್ರೀನಿವಾಸಾಚಾರಿ ಹತಾಶನಾದ. ಸೀತಾಬಾಯಿ, ರಾಧೆ ಕಣ್ಣೀರು ಕೋಡಿ ಹರಿಸಿದರು. ರಮಾಬಾಯಿ ಲಟಿಗೆ ಮುರಿದರು.

ಮದುವೆ ಶಾಸ್ತ್ರವಾಗಿ ರಾಧೆಯ ಕನ್ಯಾಸೆರೆ ಬಿಡುಗಡೆ ಆಯ್ತು. ಪ್ರಾಣೇಶನ ಹೆಂಡತಿ ಎಂಬುದಕ್ಕೆ ಕೊರಳಲ್ಲಿ ಮಂಗಳಸೂತ್ರವೊಂದಿದೆ. ಉಳಿದಂತೆ ಅವಳು ಮೊದಲು ಯಾವ ಸ್ಥಿತಿಯಲ್ಲಿದ್ದಳೋ ಈಗಲೂ ಅದೇ ಸ್ಥಿತಿಯಲ್ಲಿದ್ದಾಳೆ. ಮನೆಯವರಿಗೆ ಅವಳು ಒಂದು ಭಾರವಾದ ವಸ್ತು. ತನ್ನ ದೇಹ ಸಹ ತನಗೆ ಭಾರವಾಗಿದೆ. ಮೊದಲೇ ಆರೈಕೆ ಸಾಲದೆ ಹುಡುಗಿ ಮಡಿಕೋಲಿನಂತಿದ್ದಳು. ಈಗ ಕೇವಲ ಎಲುಬಿನ ಗೂಡಿನಂತಾಗಿದ್ದಾಳೆ.

ಪ್ರಾಣೇಶ ತನ್ನ ಕೈ ಹಿಡಿದ ಗಂಡ, ಅವನೇ ದೇವರು. ಆದರೆ ಆ ದೇವರಿಗೆ ಸ್ವತಃ ನಿರ್ಧಾರವನ್ನು ತೆಗೆದುಕೊಳ್ಳುವ ಶಕ್ತಿ ಇಲ್ಲವೆಂದಾಗಲೀ ಅದೊಂದು "ದಡ್ಡ" ದೇವರೆಂದಾಗಲೀ ಅವಳು ತಿಳಿದಿಲ್ಲ. ತನ್ನ ಪ್ರಾಚೀನ ಕರ್ಮದಿಂದ ಹೀಗಾಗಿದೆ. ಹಿಂದೆ ಯಾವುದೋ ಜನ್ಮದಲ್ಲಿ ಯಾರಿಗೋ ಉಸ್ ಎನಿಸಿರಬೇಕು, ಯಾವ ದೇವರಿಗೊ ಕಣಗಲು ಹೂವು, ಎಕ್ಕೆ ಹೂವುಗಳನ್ನು ಏರಿಸಿರಬೇಕು, ಅದರಿಂದ ಹೀಗೆಲ್ಲ ಅನರ್ಥವಾಯಿತು. ಅದನ್ನೆಲ್ಲ ತಾನೇ ಅನುಭವಿಸಬೇಕು ಎಂದು ತರ್ಕಮಾಡಿದ್ದಾಳೆ, ಸಿದ್ಧಾಂತಕ್ಕೆ ಬಂದಿದ್ದಾಳೆ.

"ನಾನು ನದಿ ಹಾರಿಕೊಳ್ಳುವುದೊಂದೇ ಬಾಕಿ ಉಳಿದಿದೆ, ನೀವು ನನ್ನನ್ನು ಕಾಪಾಡಬೇಕು.''

"ನನ್ನಿಂದ ಏನೂ ಸಾಧ್ಯವಾಗುವುದಿಲ್ಲ. ನೀನು ನಿಮ್ಮೂರಿಗೆ ಹೊರಡು"

"ಊರಿನಲ್ಲಿ ನರಕವನ್ನನುಭವಿಸಿ ಇಲ್ಲಿಗೆ ಬಂದಿದ್ದೇನೆ. ನಿಮ್ಮ ಪಾದವೇ ಗತಿ".

"ನಿನ್ನ ಮೇಲೆ ನನಗೆ ಯಾವ ದ್ವೇಷವೂ ಇಲ್ಲ. ಆದರೆ ನನ್ನ ಕೈ ಏನೂ ನಡೆಯುವ ಹಾಗಿಲ್ಲ. ನನ್ನನ್ನು ನೀನು ನೋಡಿದೆಯೆಂದು ತಂದೆಗೆ ಗೊತ್ತಾದರೆ ನಾನು ಉಳಿಯುವುದು ಕಷ್ಟ. ನಿನ್ನ ಆಲೋಚನೆ ಬಿಡಬೇಕೆಂದು ತುಂಬಾ ಒತ್ತಾಯಮಾಡುತ್ತಿದ್ದಾನೆ. ನಿನ್ನ ಹೆಸರೆತ್ತಿದರೆ ನನಗೆ ಒಂದು ಬಿಡಿಕಾಸು ಕೊಡದೆ ಒದ್ದು ಹೊರಗೆ ಹಾಕುವುದಾಗಿ ಹೆದರಿಸುತ್ತಿದ್ದಾನೆ."

"ನೀವು ಗಂಡಸಲ್ಲವೇ ? ನಿಮಗೆ ದುಡಿಯುವ ಶಕ್ತಿ ಇಲ್ಲವೇ ? ಇರುವ ಅಲ್ಪ ಸಂಪಾದನೆಯಲ್ಲಿಯೇ ಕಾಲ ಹಾಕೋಣ. ತಂದೆತಾಯಿಗಳ ಮಾತನ್ನು ಕೇಳುವುದು ಧರ್ಮವಾಗಿರುವಂತೆ, ಮಾಡಿಕೊಂಡ ಹೆಂಡತಿಯನ್ನು ಸಾಕುವುದೂ ಧರ್ಮವಲ್ಲವೇ ? ಏನೂ ತಿಳಿಯದ ನನ್ನಂತಹ ಹೆಣ್ಣು ಹೆಂಗಸಿನಿಂದ ನೀವು ಬುದ್ಧಿ ಹೇಳಿಸಿಕೊಳ್ಳಬೇಕೆ ? ದಯಮಾಡಿ ಒಂದು ನಿರ್ಧಾರಕ್ಕೆ ಬನ್ನಿ. ದೇವರು ದಾರಿ ತೋರಿಸುತ್ತಾನೆ."

" ಈ ಪುರಾಣವೆಲ್ಲ ನನಗೆ ಬೇಕಿಲ್ಲ, ತೊಲಗು ಇಲ್ಲಿಂದ ಮೊದಲು"

"ಹಾಗಾದರೆ ಹೊರಡಬೇಕೆ ? ನಿಮಗೆ ಕರುಣೆ, ದಯೆ ಇಲ್ಲವೆ ?"

"ಇಲ್ಲ, ಏನೂ ಇಲ್ಲ. ನಿನ್ನನ್ನು ಮದುವೆಯಾಗಿ ನಾನು ಕೆಟ್ಟೆ"

ರಾಧೆ ಕಣ್ಣೀರುಗರೆಯುತ್ತ ಅಲ್ಲಿಂದ ಹೊರಟಳು. ಪ್ರಾಣೇಶ ತಲೆ ತಗ್ಗಿಸಿ ಮನೆಯ ಕಡೆ ತೆರಳಿದ.

* * *

ವೆಂಕೋಬಾಚಾರಿ ಶ್ರೀನಿವಾಸಾಚಾರಿಯಿಂದ ಹಣ ಬಂದ ವಿನಾ ನಿಷೇಕ ಮಾಡಿಕೊಳ್ಳುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿದ ಪ್ರಯುಕ್ತ

ರಾಧೆಗೆ ದಿಕ್ಕು ತೋರದಾಯಿತು. ಮದುವೆಯಾದ್ದರಿಂದತನ್ನ ಸಂಕಷ್ಟಗಳೆಲ್ಲ ನೀಗಿದವೆಂದು ಆಕೆ ತಿಳಿದಿದ್ದಳು ಆದರೂ ಆಕೆಯ ಕಷ್ಟಪರಂಪರೆ ಈಗ ಆರಂಭ ವಾಯಿತು ಗಂಡಸಾದರೆ ಮನೆ ಬಿಟ್ಟು ಹೋಗಬಹುದು, ದುಡಿಯಬಹುದು, ಹೊಟ್ಟೆಹೊರೆಯಬಹುದು ಹೆಂಗಸು ತನ್ನ ಆರ್ಥಿಕ ಅಸ್ವಾತಂತ್ರ್ಯದ ಪರಿಣಾಮವಾಗಿ ಮೂಕವೇದನೆಯನ್ನು ಅನುಭವಿಸಬೇಕು. ಮಾಡಿಕೊಂಡ ಗಂಡ, ದಡ್ಡ ದಬಕನೋ, ತಿಳಿಗೇಡಿಯೋ ಆದಲ್ಲಿ ಅವಳು ಸಾಯುವ ಪರ್ಯಂತ ತೊಂದರೆ ಅನುಭವಿಸಬೇಕು ನಿತ್ಯ ಶನಿ, ವಾರಶನಿ, ವರ್ಷಶನಿ, ಜನ್ಮಶನಿ ಎಂಬೊಂದು ಗಾದೆಯು ಮಾತಿದೆ. ಇದರ ವಿವರಣೆ ಅಗತ್ಯವಾಗಿದೆ. ಯಾವುದೋ ಒಂದು ತರಕಾರಿ ತರುತ್ತೇವೆ, ಅದು ಚೆನ್ನಾಗಿರುವುದಿಲ್ಲ, ಅದರ ಕಾಟ ಒಂದೇ ದಿನ. ಮಾರನೇ ದಿನ ಬೇರೆ ತರಕಾರಿ ತಂದರೆ ತೀರಿತು. ಅದರಂತೆ ದಬ್ಬಣಸಾಲೆಯೋ, ಗಜೇಂದ್ರಭೋಗವೋ, ಅಥವಾ ಕುಸುಬಲ ಅಕ್ಕಿಯೋ, ಯಾವುದನ್ನೋ ತರುತ್ತೇವೆ. ಇದರ ಕಾಟ ಒಂದು ವಾರದಮಟ್ಟಿಗೆ ಇರುತ್ತದೆ. ಬಣ್ಣಹೋಗುವ ಅಥವ ನಮಗೆ ಹಿಡಿಸದ ಬಟ್ಟೆ, ಸೀರೆ ತಂದಿರುತ್ತೇವೆ. ಇದರ ಆಯುಸ್ಸು ಒಂದು ವರ್ಷವಿರುತ್ತಾದ್ದರಿಂದ, ಅದರ ಕಾಟವನ್ನು ಕಳೆಚಬಹುದು ಆದರೆ ಮದುವೆಯಾದ ಗಂಡ ಹೆಂಡರಲ್ಲಿ ಸಾಮ್ಯ ಇಲ್ಲದಿದ್ದರೆ ಅದು ಜನ್ಮ ಶನಿ. ಎರಡರಲ್ಲಿ ಒಂದು ಘಟ ಉರುಳಬೇಕು. ಆದಾದ ಮೇಲೂ ಅದಕ್ಕೆ ಸಂಬಂಧಿಸಿದ ವಿಷಯಗಳೂ ಕಾಡುತ್ತಿರುತ್ತವೆ.

ರಾಧೆ ಬಹಳವಾಗಿ ಆಲೋಚಿಸಿದಳು. ಹೇಗಾದರೂ ಮಾಡಿ ಒಂದು ಬಾರಿ ಪ್ರಾಣೇಶನನ್ನು ನೋಡಿ, ಅವನಿಗೆ ತನ್ನ ಅಳಲನ್ನು ತೋಡಿಕೊಳ್ಳ ಬೇಕೆಂಬ ನಿರ್ಧಾರಕ್ಕೆ ಬಂದಳು. ತಂದೆ ಈಚೆಗೆ ಸಿಡಿಮಿಡಿಗುಟ್ಟುತ್ತಾನೆ. ಅವನನ್ನು ಮಾತನಾಡಿಸಿದರೆ ಹಸಿದ ಹುಲಿಯಂತೆ ಆರ್ಭಟಿಸುತ್ತಾನೆ. ತಾಯಿ ಮನಸ್ಸಿನಲ್ಲಿಯೇ ನೊಂದುಕೊಳ್ಳುತ್ತಿದ್ದಾಳೆ. ಮಗಳಿಗೆ ತನ್ನ ಗಂಡನ ನೆನಪು ಆದಲ್ಲಿ ಅವಳು ನೊಂದುಕೊಳ್ಳುವಳೆಂದು ಆ ವಿಚಾರವನ್ನೇ ಪ್ರಸ್ತಾ ಪಿಸುತ್ತಿರಲಿಲ್ಲ. ತಾಯಿಯ ದುಃಖ ಹೆಚ್ಚಬಾರದೆಂದು ರಾಧೆ ಆ ವಿಚಾರ ವಾಗಿ ಎಂದೂ ಮಾತನಾಡುತ್ತಿರಲಿಲ್ಲ. ರಮಾಬಾಯಿಯ ಇದಿರು ಸಹ ಇವರಿಬ್ಬರೂ ಮಾತನಾಡುತ್ತಿರಲಿಲ್ಲ. ರಾಧೆ ಕರಿಗಾಲಿನವಳು, ಅವಳ ಕಾಲು ಗುಣ ಚೆನ್ನಾಗಿಲ್ಲ, ಅವಳ ಹುಟ್ಟು ನಕ್ಷತ್ರ ಚೆನ್ನಾಗಿಲ್ಲ, ಒಂದೇ ಮಾತಿನಲ್ಲಿ

ಹೇಳಬೇಕೆಂದರೆ ಅವಳು ಹುಟ್ಟಲೇಬಾರದಿತ್ತು ಅಥವಾ ಹುಟ್ಟಿದ ಕೂಡಲೇ ಸಾಯಬೇಕಾಗಿತ್ತು. ಈ ಬೈಗಳದ ಬೆಂಕಿ ಒಂದೊಂದು ತಡವೆ ಹೊನ್ನಾಳಿಗೂ ಹಬ್ಬುವುದುಂಟು. ಪ್ರಾಣೇಶ, ವೆಂಕೋಬಾಚಾರಿ ಮತ್ತು ವೆಂಕೂಬಾಯಿ ಯವರ ಶವಗಳ ಮೆರವಣಿಗೆಯನ್ನೇ ತರುತ್ತಾಳೆ, ಎಲ್ಲರನ್ನೂ ಸಿಡಿಯಿಟ್ಟು ಶಪಿಸುತ್ತಾಳೆ. ನಿಜಕ್ಕೂ ಆಕೆ ಮಹಾಪತಿವ್ರತೆಯಾಗಿದ್ದರೆ ಜಗತ್ತೆಲ್ಲ ಪ್ರಳಯವಾಗಿ ಎಷ್ಟೋ ವರ್ಷಗಳಾಗುತ್ತಿದ್ದವು.

ಮನೆಯಲ್ಲಿ ಮುಜಗರ ದಿನದಿನಕ್ಕೆ ಹೆಚ್ಚಾಗಲಾರಂಭಿಸಿತು. ಪ್ರತಿಯೊಬ್ಬರು ಈ ಅನರ್ಥ ಪರಂಪರೆಗೆ ತಾವು ಕಾರಣರೇ ಹೇಗೆ ಎಂದು ಆತ್ಮಶೋಧನೆ ನಡೆಸುತ್ತಿದ್ದರು. ತಮ್ಮ ನಡತೆ ತಮ್ಮ ಕಾರ್ಯ ಎಲ್ಲಿಯೋ ಮುಗ್ಗರಿಸಿರಬೇಕೆಂದು ತಿಳಿದು ತಮ್ಮನ್ನು ತಾವೇ ಹಳಿದುಕೊಳ್ಳುವರು. ಮಾನವನ ದುರಾಸೆ, ಕಾಪಟ್ಯ, ಮತ್ತು ತಮಗೆ ಅಂಟಿದ್ದ ಬಡತನ ಈ ಎಲ್ಲ ವ್ಯಾಧಿಗಳಿಗೆ ಕಾರಣವೆಂಬುದನ್ನು ಅರಿಯದಾದರು. ಅಥವಾ ಒಂದು ವೇಳೆ ಅರಿತಿದ್ದರೆ ಅದರಿಂದ ಆಗುತ್ತಿದ್ದ ಪರಿಣಾಮವಾದರೂ ಅಷ್ಟರಲ್ಲಿಯೇ ಇತ್ತು.

ನ್ಯಾಮತಿಯಿಂದ ಹೊನ್ನಾಳಿಗೆ ಒಂಭತ್ತು ಮೈಲಿ ದೂರ. ಶಿವಮೊಗ್ಗಿಯಿಂದ ಹರಿಹರಕ್ಕೆ ಹೋಗುವ ಬಸ್‌ಗಳು ನ್ಯಾಮತಿ ಮೂಲಕ ಹೋಗುತ್ತವೆ. ಬಸ್‌ನಲ್ಲಿ ಹೋಗಲು ರಾಧೆಯಲ್ಲಿ ಬಿಡಿಕಾಸಿಲ್ಲ, ತಾಯಿಯ ಬಳಿಯೂ ಇಲ್ಲ, ತಂದೆಯನ್ನು ಕೇಳುವಂತಿಲ್ಲ. ಅಲ್ಲದೆ ತಾನು ಹೊನ್ನಾಳಿಗೆ ಹೋಗುವ ವಿಚಾರ ಯಾರಿಗೂ ತಿಳಿಯಬಾರದೆಂದು ಆಕೆ ನೆನಸಿದ್ದಳು. ಊರಿನ ಆಚೆ ತುದಿಯಲ್ಲಿರುವ ಇನ್ನೊಬ್ಬ ಶಾನುಭೋಗರ ಮಗಳು ಪದ್ಮಾವತಿ, ರಾಧೆಯ ಸ್ನೇಹಿತೆ. ಇಬ್ಬರೂ ಓರಗೆಯವರು, ಒಟ್ಟಿಗೆ ಆಡಿದವರು. ಪದ್ಮಾವತಿ ಋತುಮತಿಯಾದ ಒಂದು ವಾರದಲ್ಲಿಯೇ ಅವಳ ಗಂಡ ಇಹಲೋಕಯಾತ್ರೆಯನ್ನು ಮುಗಿಯಿಸಿದ್ದ. ರಾಧೆಗೂ, ಪದ್ಮಾವತಿಗೂ ಅಷ್ಟೇನು ವ್ಯತ್ಯಾಸವಿಲ್ಲ. ಪದ್ಮಾವತಿಯ ಗಂಡ ಸತ್ತು ಸತ್ತಿದ್ದಾನೆ. ರಾಧೆಯ ಗಂಡ ಬದುಕಿ ಸತ್ತಿದ್ದಾನೆ. ಆದರೆ ಪದ್ಮಾವತಿಯ ತಂದೆ ಇದ್ದುದರಲ್ಲಿ ಅನುಕೂಲಸ್ಥರಾದ್ದರಿಂದ ಅವಳಿಗೆ ಅನ್ನ ಬಟ್ಟೆಯ ಯೋಚನೆ ಇರಲಿಲ್ಲ.

ಇಂಥ ಮನೆ ತಪ್ಪಿದ ಹುಡುಗಿಯರು "ಏಕದಮ್'' ವೈರಾಗ್ಯ ತಾಳಬೇಕಾಗುತ್ತದೆ. ಕೆಲವರು ಗಂಡ ಸತ್ತರೂ ಅವನ ಮನೆಯಲ್ಲಿಯೇ ಇರ

ಬೇಕಾಗುತ್ತದೆ. ನನ್ನತನ ಎಂಬುದು ಅವರಿಗೆ ಇರುವುದಿಲ್ಲ. ಅವರ ಮನೆಯವರು ಅತ್ತರೆ ಆಕೆ ಅಳಬೇಕು. ನಕ್ಕರೆ ನಗಬೇಕು. ಹಬ್ಬಹರಿದಿನಗಳಲ್ಲಿ ಎಲ್ಲರೂ ನಗುತ್ತ ಕೆಲೆಯುತ್ತಿರಬೇಕಾದಾಗ ಈಕೆ ಅಡಿಗೆ ಮನೆಯಲ್ಲಿ ಅಡಿಗೆ ಮಾಡುತ್ತಿರಬೇಕು. ತನಗೆ ದೇವರು ಮಾಡಿದ ಅನ್ಯಾಯ ನೆನಸಿಕೊಂಡು ಕಣ್ಣೀರು ಕರೆದರೆ ಮನೆ ಮಂದಿಯೆಲ್ಲ ಈಕೆಗೆ ಸಾಕುಸಾಕೆನಿಸುತ್ತಾರೆ. "ತುಂಬಿದ ಮನೆಯಲ್ಲಿ ಇದೇನನ್ಯಾಯ. ತಾನು ಪಡೆದದ್ದನ್ನು ತಾನು ಭೋಗಿಸಬೇಕು, ಹಿಂದಿನ ಜನ್ಮದಲ್ಲಿ ಯಾವುದೋ ಪಾಪವಾಡಿ ಈಗ ಅನುಭವಿಸುವುದಿಲ್ಲವೆಂದರೆ ಆಗುತ್ತದೆಯೇ ? ನಾವೇ ಧರ್ಮಕ್ಕೆ ಕಟ್ಟುಬಿದ್ದು ಇಷ್ಟು ಅನ್ನ, ಬಟ್ಟೆ ಕೊಡುತ್ತಿದ್ದೇವೆ ಬೇರಾದರೂ ಆಗಿದ್ದರೆ ಏನು ಮಾಡುತ್ತಿದ್ದರೋ ?" ಈ ಪ್ರಶ್ನೆಗೆ ಉತ್ತರವೇ ಇಲ್ಲ. ಸತ್ಯದ ತಲೆಯ ಮೇಲೆ ಹೊಡೆಯುವ ಮಹಾಪುಳ್ಳು.

ಬೆಳಗಿನ ಕಾಫಿ ಉಪಹಾರಾದಿಗಳನ್ನು ತಯಾರಿಸಬೇಕು. ಮಧ್ಯಾಹ್ನದ ಅಡಿಗೆ ಮಾಡಿ ಒಂದೊಂದು ಪಂಕ್ತಿಗೆ ಒಬ್ಬೊಬ್ಬರಿಗೆ ಬಡಿಸಬೇಕು. ಮಧ್ಯಾಹ್ನ ಎರಡು ಅಥವಾ ಮೂರು ಗಂಟೆಗೆ ಒಂದು ಊಟ. ಸಾಯಂಕಾಲವಾಗುತ್ತಲೆ ದೇವಸ್ಥಾನ ಅಥವಾ ಮಠದಲ್ಲಿ ನಡೆಯುವ ಪುರಾಣ ಶ್ರವಣಕ್ಕೆ ಹೋಗಬೇಕು. ಅಲ್ಲಿ ಸಹ ಬರಿ ಪುರಾಣ ಶ್ರವಣವಿಲ್ಲ. ಹತ್ತಿ ಬಿಡಿಸುವುದು, ಬತ್ತಿ ಮಾಡುವುದು. ಪುರಾಣಕಾರ ಯಾವ ದಾನ ಮಾಡಿದರೆ ಎಷ್ಟು ಪುಣ್ಯ ಬರುತ್ತೆ, ಯಾವ ಯಾವ ಹಬ್ಬಗಳಲ್ಲಿ ಏನು ಏನು ದಾನ ಮಾಡಬೇಕು ಎಂಬ ಪಟ್ಟಿಯನ್ನೇ ಓದುತ್ತಿರುತ್ತಾನೆ. ಹತ್ತಿ ಬಿಡಿಸುತ್ತ ಕುಳಿತಿರುವ ಹೆಂಗಸರು ಸಹ ಈ ಪುಣ್ಯದ ರಾಶಿಯನ್ನು ಪಡೆಯಲು ದಾನ ಕೊಡಲು ತಮ್ಮಲ್ಲಿ ಹಣವಿಲ್ಲವಲ್ಲಾ, ಎಂದು ಮರಮರ ಮರುಗುತ್ತಿರುತ್ತಾರೆ. ಅಕಸ್ಮಾತ್ತಾಗಿ ಏನಾದರೂ ಹಣ ಸಿಕ್ಕರೆ ಈ ಪುಣ್ಯ ಫಲಗಳನ್ನು ಪಡೆಯಲು ಹಣವನ್ನು ವಿನಿಯೋಗಿಸುತ್ತಾರೆ. ಮೊದಲೇ ಅಂಧಶ್ರದ್ಧೆ ತುಂಬಿದ ನಮ್ಮೀ ದೇಶದಲ್ಲಿ ಅಂಧಶ್ರದ್ಧೆ ಹೆಚ್ಚಲು ಈ ಪುರಾಣ ಕಟ್ಟೆಗಳು ಒಂದು ಕ್ಷೇತ್ರವಾಗಿವೆ. ದೇವರು, ಸ್ವರ್ಗ, ನರಕ, ಪಾಪ, ಪುಣ್ಯ ಈ ಸಂಬಂಧವಾದ ಪ್ರಶ್ನೆಗಳನ್ನು ಹಣದಿಂದಲೇ ಬಿಡಿಸಬಹುದೆಂದು ಪುರಾಣಕಾರ ಹೇಳುತ್ತಿರುತ್ತಾನೆ. ಇಲ್ಲದಿದ್ದರೆ ಅವನು ಚರಿತಾರ್ಥ ಸಾಗುವದಾದರೂ ಹೇಗೆ?

ನಲವತ್ತು ವರ್ಷಗಳು ತುಂಬಿದರೆ ಕಣ್ಣು ಮಂಜಾಗಿ "ಚಾಳೀಸ" ತೆಗೆದುಕೊಳ್ಳಬೇಕಾಗುತ್ತದೆ. ಹಾಗೆಯೇ ಹೂಡಬಾರದ್ದನ್ನು ಮಾಡಿ ಆಡ ಬಾರದ ಆಟಗಳನ್ನು ಆಡಿ, ಐವತ್ತು ವರ್ಷ ತುಂಬುತ್ತಲೇ ಮನುಷ್ಯ "ವೇದಾಂತ" ಕ್ಕೆ ಆರಂಭಿಸುತ್ತಾನೆ. ವೇದಾಂತ ಸಹ ಚಾಳೀಸ (ಕನ್ನಡಕ) ದಂತೆ ಯಾವುದೋ ಒಂದು ನಿರ್ದಿಷ್ಟ ವಯಸ್ಸಿಗೆ ಬಂದ ಮೇಲೆ ತೆಗೆದು ಕೊಳ್ಳುತ್ತಾನೆ. ವೇದಾಂತ ಚಾಳೀಸದಂತೆ ಅಂಗಡಿಯಲ್ಲಿ ದೊರೆಯುವ ಒಂದು ವಸ್ತುವಾಗಿದೆ. ಅದನ್ನು ಯಾರು ಬೇಕಾದರೂ, ಯಾವಾಗ ಬೇಕಾದರೂ ಕೊಂಡುಕೊಳ್ಳಬಹುದು. ವೇದಾಂತ ಶಬ್ದದ ಹಾದರ ಈಗ ಆಗಿರುವಷ್ಟು ಮತ್ತಿನ್ನಾವಾಗಲೂ ಆಗಿಲ್ಲವೆನ್ನಬಹದು.

ಪ್ರಪಂಚವನ್ನು ಕುತೂಹಲದಿಂದ ನೋಡಲಪೇಕ್ಷಿಸಿದ ಹಸುಳೆಗಳು ವಿಧವೆಯರಾಗಿ, ಎಲ್ಲ ಪಾರ್ಥಿವ ಸುಖಗಳನ್ನೂ ಕಳೆದುಕೊಳ್ಳುತ್ತಾರೆ. ಅವರ ತಲೆಯ ಮೇಲೆ ವೈರಾಗ್ಯದ ಪರ್ವತವನ್ನೇ ಹೊರಿಸುತ್ತಾರೆ. ಒತ್ತಾಯದಿಂದ ಹೊರಿಸಿದ ವೈರಾಗ್ಯ ಜೀರ್ಣಿಸಿಕೊಳ್ಳಲು ಅಷ್ಟು ಸುಲಭವೇನೂ ಅಲ್ಲ. ಜೀವಿತದ ಆಸೆ ಆಕಾಂಕ್ಷೆಗಳನ್ನು ಗಾಳಿಗಿಂತ ಹಗುರವಾಗಿ ತೂರುವುದಾದರೂ ಹೇಗೆ ? ಯಾವ ಗುರಿ ಸಾಧಿಸಬಹುದೆಂದು ಸಮಾಜ ನಿರೀಕ್ಷಿಸಿರುತ್ತದೋ, ಅದು ಸಾಧಿತವಾಗದೆ ಅದರ ಪ್ರತಿಕ್ರಿಯೆಗಳು ಅತ್ಯಂತ ದಾರುಣವಾದ ವಿಷ ಫಲಗಳನ್ನು ಕೊಡುತ್ತವೆ.

ಪದ್ಮಾವತಿಯ ತಂದೆ ಅವಳ ಮೇಲೆ ಇನ್ನೂ ವೈರಾಗ್ಯದ ಹೊರೆ ಹೊರಿಸಲು ಪ್ರಯತ್ನಿಸಿರಲಿಲ್ಲ. ಮಗಳು ಕಣ್ಣೀರು ಮಿಡಿಯುವುದು ಬಿಟ್ಟರೆ ಸಾಕೆಂದು ಆತ ಬಯಸಿದ್ದ. ಅವಳ ಹೆಗಲ ಮೇಲೆ ಕೂತಿದ್ದ ಹೋಗಲಾರದ ಹೊತ್ತು ಹೋಗಲು ಓದಲು ಪುಸ್ತಕಗಳನ್ನು ತಂದುಕೊಡುತ್ತಿದ್ದ. ಕಸೂತಿ ಕೆಲಸ ಮಾಡಲು ಅದಕ್ಕೆ ಸಲಕರಣೆಗಳನ್ನು ಒದಗಿಸುತ್ತಿದ್ದ. ರಾಧೆ ಇಲ್ಲಿಗೆ ಬರುವುದು ದಿನವೂ ವಾಡಿಕೆಯಾಗಿತ್ತು. ರಾಧೆ–ಪದ್ಮಾವತಿಯರಿಬ್ಬರೂ ದುಃಖದಲ್ಲಿ ಸಮಭಾಗಿಗಳು. ಇಬ್ಬರೂ ಒಬ್ಬರಿಗೊಬ್ಬರು ಸಮಾಧಾನ ಹೇಳುತ್ತಿದ್ದರು.

ರಾಧೆಯು ಹೊನ್ನಾಳಿಗೆ ಹೋಗಿ ಒಂದು ಬಾರಿ ಪ್ರಾಣೇಶನನ್ನು ಕಂಡು ತನ್ನ ಅಳಲನ್ನು ತೋಡಿಕೊಳ್ಳಬೇಕೆಂದು ಪದ್ಮಾವತಿ ಸೂಚಿಸಿದ್ದಳು. ಮೊದ

ಮೊದಲು ರಾಧೆ ಈ ಸೂಚನೆಗೆ ಒಪ್ಪಲಿಲ್ಲವಾದರೂ ಒಂದು ಬಾರಿ ಪ್ರಯತ್ನ ಮಾಡುವುದು ಒಳಿತೆಂದು ಅವಳಿಗೆ ತೋರಿತು. ಆ ಸೋಮವಾರನೇ ಅಕೆ ಹೊರಡಬೇಕೆಂದೂ ನಿರ್ಧರವಾಗಿತ್ತು. ರಾಧೆ ದಿನವೂ ಬರುವಂತೆ ಪದ್ಮಾವತಿಯು ಮನೆಗೆ ಹೊರಡುವುದು, ಅಲ್ಲಿಂದ ನೇರವಾಗಿ ಹೊನ್ನಾಳಿಗೆ ಮಧ್ಯಾಹ್ನದ ಮೊದಲನೆಯ ಬಸ್ಸಿನಲ್ಲಿ ಹೋಗಿ ಸಾಯಂಕಾಲದ ಬಸ್ಸಿನಲ್ಲಿ ಬರುವುದು ಎಂದು ಗೊತ್ತಾಗಿತ್ತು. ಆದರೆ ರಾಧೆ ಬಸ್ ಚಾರ್ಜಿಗೆ ಪದ್ಮಾವತಿಯಿಂದ ಹಣ ಪಡೆಯಲು ಇಷ್ಟವಿಲ್ಲದೆ ಕಾಲುನಡಿಗೆಯಲ್ಲಿ ಹೊನ್ನಾಳಿಗೆ ಹೋದಳು. ಒಂಬತ್ತು ಮೈಲಿ ನಡಿಗೆಯಲ್ಲಿ ಸುಸ್ತಾಗಿದ್ದಳು. ಅವಳು ಊರ ಹೊರಗಿರುವ ಪ್ರೈಮರಿ ಶಾಲೆಯ ಹತ್ತಿರ ಹೋಗುವುದಕ್ಕೂ ಶಾಲೆ ಬಿಡುವುದಕ್ಕೂ ಸರಿಹೋಯಿತು. ಹತ್ತು-ಹದಿನೈದು ನಿಮಿಷಗಳಾದ ಮೇಲೆ ಪ್ರಾಣೇಶ ಹೊರಬಂದ. ಅವನ ಜೊತೆ ಇನ್ನೊಬ್ಬ ಮೇಷ್ಟರೂ ಇದ್ದರು. ತಡಮಾಡಿದರೆ ಪ್ರಾಣೇಶ ಮನೆಗೆ ಹೋಗುವನೆಂಬುದು ರಾಧೆಗೆ ತಿಳಿದಿತ್ತು. ಅವನನ್ನು ಅವನ ಮನೆಯಲ್ಲಿ ನೋಡಲು ಅವಳು ಇಷ್ಟವುಳ್ಳವಳಾಗಿರಲಿಲ್ಲ. ಅಲ್ಲಿ ಅವನನ್ನು ನೋಡಿದರೆ ಆಗುವ ಪರಿಣಾಮವೇನೆಂಬುದು ಅವಳಿಗೆ ಗೊತ್ತಿತ್ತು. ನೇರವಾಗಿ ಪ್ರಾಣೇಶನತ್ತ ಧಾವಿಸಿದಳು. ಅವನು ಏನೋ ಮಾತನಾಡುತ್ತ, ಎತ್ತಲೋ ಮುಖ ತಿರುವಿ ಹೊರಟಿದ್ದ. ಯಾವ ರೀತಿ ಉದ್ದೇಶಿಸಿ ಅವನನ್ನು ಮಾತನಾಡಿಸಬೇಕು, ಏನು ಮಾತನಾಡಬೇಕು ಎಂಬುದು ಅವಳಿಗೆ ತೋಚಲಿಲ್ಲ. ನ್ಯಾಮತಿಯಿಂದ ಹೊರಡುವ ಮುನ್ನ ಮನಸ್ಸಿನಲ್ಲಿಯೇ ಏನೇನೋ ಗುಣಾಕಾರ ಹಾಕಿಕೊಂಡಿದ್ದಳು. ಆದರೆ ಸ್ತ್ರೀ ಸಹಜವಾದ ಲಜ್ಜೆ, ಅಲ್ಲದೆ ತನ್ನ ದಾರುಣ ಪರಿಸ್ಥಿತಿ ಅವಳನ್ನು ಕಂಗೆಡಿಸಿದವು. ಈ ಒಂದುಬಾರಿ ಅವನನ್ನು ಮಾತನಾಡಿಸದಿದ್ದರೆ, ಇನ್ನು ಎಂದೂ ಸಾಧ್ಯವಿಲ್ಲವೆಂಬುದೂ ಅವಳಿಗೆ ಮನದಟ್ಟಾಗಿತ್ತು. "ರೀ" ಎಂದು ಒಂದು ಬಾರಿ ಕೂಗಿದಳು. ಪ್ರಾಣೇಶ ತಿರುಗಿದ. ರಾಧೆಯ ಗುರುತು ಅವನಿಗೆ ಒಮ್ಮೆಲೇ ಸಿಕ್ಕಲಿಲ್ಲ. ಯಾರೋ ತಿರುಕರ ಹುಡುಗಿ ತನ್ನನ್ನು ಕರೆದಿರಬೇಕೆಂದು ತಿಳಿದ. ರಾಧೆಯೋ ಇರಬಹುದೆಂಬ ಕಲ್ಪನೆ ಸಹ ಅವನಿಗೆ ಬರಲು ಸಾಧ್ಯವಿಲ್ಲ.

"ಯಾರು ?" ಎಂದು ಏನೂ ತಿಳಿಯದವನಂತೆ ಪ್ರಾಣೇಶ ಕೇಳಿದ.

" ನಾನು ರಾಧೆ "

ರಾಧೆಗೆ ದುಃಖ ಅಣೆಕಟ್ಟು ಒಡೆದ ನೀರಿನಂತೆ ಒಂದೇ ಬಾರಿಗೆ ಉಮ್ಮಳಿಸಿತು. ಏನೂ ಹೇಳಲು ತೋರಲಿಲ್ಲ. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು.

ಮದುವೆ ಸಮಯದಲ್ಲಿ ರಾಧೆ ಇಷ್ಟು ಕುರೂಪಿಯಾಗಿರಲಿಲ್ಲ. ಆಗ ಕೆನ್ನೆಗಳು ಕೊಂಚ ಮಟ್ಟಿಗೆ ತುಂಬಿಕೊಂಡಿದ್ದುವು. ಈಗ ಅವು ಗುಳಿ ಬಿದ್ದು ಅರ್ಧ ಸೇರು ಎಣ್ಣೆ ಹಿಡಿಯುವಂತಿವೆ. ಕಣ್ಣುಗಳ ಸುತ್ತ ಕರಿಯ ವರ್ತುಲ ಕಟ್ಟಿದೆ. ಮೊದಲಿನ ಬಣ್ಣ ಮಿಂಚುಗಳು ಮಾಯವಾಗಿ, ಮುಖ ಒಲೆ ಹಿಂದಿನ ಗೋಡೆಗೆ ಸುಣ್ಣ ಬಳಿದಂತಾಗಿ, ತೇಜೋಹೀನವಾಗಿದೆ. ಮಾಸಿದ, ಬಣ್ಣಹೋದ, ಚಿಂದಿಚಿಂದಿಯಾದ ಸೀರೆ. ಪ್ರಾಣೇಶನ ಎದೆ ಧಸ್ಸೆಂದಿತು. ತನ್ನ ಜೊತೆಯಲ್ಲಿದ್ದ ಮೇಷ್ಟರಿಗೆ ಹೋಗಲು ಹೇಳಿದ. ಸ್ವಲ್ಪ ಮುಂದೆ ಬಂದು ನಿಂತ. ತನ್ನ ತಂದೆಯ ರೌದ್ರಮೂರ್ತಿಯ ನೆನಪಾಯಿತವನಿಗೆ.

* * *

''ನಿನ್ನ ತಂದೆ ವಚನಭ್ರಷ್ಟನಾದರೆ ನಾನೇನು ಮಾಡಲಿ. ಇವೊತ್ತು ಅವನು ಕೊಡಬೇಕಾಗಿರುವ ಐದು ನೂರು ರೂಪಾಯಿ ಈಗ ಕೊಡಲಿ, ಎಲ್ಲವನ್ನೂ ಸರಿಮಾಡಿಸುತ್ತೇನೆ."

"ವಿಷ ತೆಗೆದುಕೊಳ್ಳಲು ಅಪ್ಪನ ಬಳಿ ಮೂರು ಕಾಸಿಲ್ಲ. ಅವನು ಅಷ್ಟೊಂದು ಹಣ ಎಲ್ಲಿಂದ ತರಬೇಕು ?''

"ಆ ಪಂಚಾಯ್ತಿ ನನಗೆ ಬೇಡ. ಕರಾರಿನಂತೆ ಅವನು ನಡೆದುಕೊಳ್ಳಬೇಕಾದ್ದು ನ್ಯಾಯವಾದ ಮಾರ್ಗ. ಬರಿಕೈಯಿಂದ ಬಂದು ನನ್ನನ್ನು ಕಾಡಿದರೆ ನಾನೇನು ಮಾಡಲಿ ? ಈಗಲೂ ಸಹ ದೇವರ ಮೇಲೆ ಆಣೆಹಾಕಿ ಹೇಳುತ್ತೇನೆ. ಹಣ ಬಂದಕೂಡಲೇ ಎಲ್ಲ ವ್ಯವಸ್ಥೆಮಾಡಿಸುತ್ತೇನೆ. ನಿಮ್ಮ ಅಪ್ಪನಿಂದ ನನಗಿನ್ನೂ ಹಣ ಬರಬೇಕಾಗಿದೆ. ಆದರೆ ಅದರ ಪ್ರಸ್ತಾಪ ಈಗ ಬೇಡ........"

"ಏನಾದರೂ ಮಾಡಿ ನನ್ನನ್ನು ದಡ ಕಾಣಿಸಿ. ಇಲ್ಲದಿದ್ದರೆ ನಾನು ಬಾಳುವುದು ಕಷ್ಟವಾಗುತ್ತದೆ"

"ರಾಧೆ, ಸುಮ್ಮನೆ ಹೊರಟು ಹೋಗು, ಹಣವಿಲ್ಲದೆ ನಾನೇನೂ ಮುಂದುವರಿಯಲು ಸಾಧ್ಯವಿಲ್ಲ"

"ಐದುನೂರು ರೂಪಾಯಿನಲ್ಲೇ ಎಲ್ಲ ಆಗಮಾಡಿಸುವುದಾಗಿ ಹೇಳಿದ್ದಿರಿ?"

''ಬಾಯಿ ಮುಚ್ಚು, ಸಣ್ಣ ಬಾಯಲ್ಲಿ ದೊಡ್ಡ ಮಾತು[illegible]ದು. ನನ್ನ ಅವರ ಲೆಕ್ಕಾಚಾರ ನಿನಗೇನು ಗೊತ್ತು, ಮೊದಲು ಹೊರಡು ಇಲ್ಲಿಂದ."

. . . .

ಪ್ರಾಣೇಶನಿಂದ ಛೀಮಾರಿ ಹಾಕಿಸಿಕೊಂಡ ರಾಧೆ ಕೊಂಚ ಹೊತ್ತು ಅಲ್ಲಿಯೇ ಸುಸ್ತಾಗಿ ಕುಳಿತಳು. ಪ್ರಾಣೇಶ ತಿರುಗಿ ಸಹ ನೋಡದೆ ಹೊರಟು ಹೋದ. ಅವನಿಗೊಂದು ಭಯ ಅಳುಕುತ್ತಿತ್ತು. ರಾಧೆ ತನ್ನನ್ನು ನೋಡಿದ ವಿಷಯ ತಂದೆಗೆ ತಿಳಿದರೆ ತನ್ನ ಗತಿ ಏನು ಎಂದು ಯೋಚಿಸತೊಡಗಿದ. ಆದರೆ ಆ ಸ್ಥಳದಲ್ಲಿ ಯಾರೂ ಇಲ್ಲದ್ದನ್ನು ನೋಡಿ ಅವನ ಮನಸ್ಸು ಸ್ವಲ್ಪ ಸಮಾಧಾನಗೊಂಡಿತು. ತನ್ನ ಜೊತೆಗೆ ಬಂದಿದ್ದ ಮೇಷ್ಟರ ಮನೆಗೆ ಓಡಿದ. ಅವರು ಮನೆಯ ಕಟ್ಟೆಯ ಮೇಲೆ ಯಾರೊಂದಿಗೋ ಮಾತನಾಡುತ್ತ ಕುಳಿತಿದ್ದರು. ಪ್ರಾಣೇಶ ಅವರನ್ನು ಈಚೆಗೆ ಕರೆದು ತಾನು ರಾಧೆಯನ್ನು ನೋಡಿದ ವಿಚಾರವನ್ನು ತನ್ನ ತಂದೆಗೆ ಹೇಳಬಾರದೆಂದು ಅಂಗಲಾಚಿ ಬೇಡಿಕೊಂಡ. ಉಪಾಧ್ಯಾಯ ಸಹಜರಾದ ಆ ಮೇಷ್ಟರಿಗೆ ಮನೆ ತುಂಬಾ ಮಕ್ಕಳು ಅಲ್ಲದೆ ಆವರ ಮನೆಯಲ್ಲಿ ಮಕ್ಕಳಲ್ಲದೆ ತುಂಬಲು ಏನೂ ಇರಲಿಲ್ಲ. ಕಷ್ಟ ಸುಖಗಳನ್ನು ಕಂಡವರವರು. ಪ್ರಾಣೇಶನಿಗೆ ಅವನ ತಪ್ಪಿನ ಅರಿವು ಮಾಡಿಕೊಟ್ಟು ಅವನನ್ನು ಮಾರ್ಗಕ್ಕೆ ಹಚ್ಚಲು ಅವರು ಪ್ರಯತ್ನಿಸಿದರು. ''ಮೇಷ್ಟರೇ, ಸಾಕ್ಷಾತ್ ದೇವರೇ ಪ್ರತ್ಯಕ್ಷನಾಗಿ ಬಂದರೂ ನಮ್ಮಪ್ಪ ಒಪ್ಪುವುದಿಲ್ಲ. ತನಗೆ ಬರಬೇಕಾಗಿರುವ ಹಣವನ್ನು ಆ ದೇವರು ಕೊಟ್ಟರೆ ಮಾತ್ರ ಅವನೊಪ್ಪುತ್ತಾನೆ. ನನ್ನಿಂದ ಈ ವಿಚಾರದಲ್ಲಿ ಏನೂ ಸಾಧ್ಯವಿಲ್ಲ. ನೀವು ತಲೆ ಕೆಡಿಸಿಕೊಳ್ಳಬೇಡಿ."

"ಭಗವಂತನ ಚಿತ್ತದಲ್ಲಿ ಏನಾಗಬೇಕೆಂದಿದೆಯೋ ಅದಾಗುತ್ತದೆ. ಆದರೆ ಒಟ್ಟಿನಲ್ಲಿ ನಿಮಗೆ ಇದರಿಂದ ಒಳ್ಳೆಯದಾಗುವುದಿಲ್ಲ. ನನಗೇಕೆ ನಿಮ್ಮ ಸಂಸಾರದ ರಹಸ್ಯ. ನಿನ್ನ ಹೆಂಡತಿ ನಿನ್ನನ್ನು ನೋಡಿದ ವಿಚಾರ ನಿಮ್ಮ ಅಪ್ಪನಿಗೇ ಏಕೆ, ಯಾರಿಗೂ ಹೇಳುವುದಿಲ್ಲ. ಸ್ವಸ್ಥ ಚಿತ್ತ

ದಿಂದ ಹೊರಟು ಹೋಗು.” ಪ್ರಾಣೇಶ ದುರ್ದಾನ ಹಿಡಿದ ಬ್ರಾಹ್ಮಣನಂತೆ ಒಂದೇ ಬಾರಿಗೆ ಮನೆಯ ಕಡೆ ಓಡಿದ.

ರಾಧೆ ಸ್ವಲ್ಪ ಹೊತ್ತು ಕೂತವಳು ಮೆಲ್ಲಗೆ ಸಾಗಿದಳು. ದಾರಿಯಲ್ಲಿ ಹೋಗುವ ಯಾರನ್ನೋ ಕೇಳಿ ಮಾಧವಾಚಾರಿಯ ಮನೆಗೆ ಹೋದಳು. ಮಾಧವಾಚಾರಿ ಹಳ್ಳಿಗರ ಯಾವುದೊ ಪಂಚಾಯ್ತಿಯಲ್ಲಿ ತಲ್ಲೀನನಾಗಿದ್ದ. ರಾಧೆಯನ್ನು ನೋಡಿದಾಗ ಅವನ ಕಿರಿಯ ಮುಖ ಕೆಂಪೇರಿ ಊದಾ ಬಣ್ಣಕ್ಕೆ ತಿರುಗಿತ್ತು. ವಿಷಯ ಏನಿರಬಹುದೆಂದು ಮೊದಲೇ ಊಹಿಸಿದ್ದ.

*   *   *   *

ಹೊನ್ನಾಳಿಯ 'ಟ್ರಾವಲರ್ಸ್ ಬಂಗಲೊ' ಬಳಿ ದಾರಿ ಕವಲೊಡೆಯುತ್ತದೆ. ಒಂದು ಹರಿಹರಕ್ಕೆ–ಒಂದು ಶಿವಮೊಗ್ಗಿಗೆ. ಟ್ರಾವಲರ್ಸ್ ಬಂಗಲೊ ಹಿಂದೆ ತುಂಗಭದ್ರಾನದಿ ಹರಿಯುತ್ತದೆ. ಅಲ್ಲಿಯೇ ಸೇತುವೆ. ತನ್ನೆಲ್ಲ ದುಃಖವನ್ನೂ ತಾಯಿ ತುಂಗೆಯ ಮಡಿಲಲ್ಲಿ ಏಕೆ ತುಂಬಬಾರದು ಎಂಬ ಯೋಚನೆ, ಕೋಲ್ಮಿಂಚಿನಂತೆ ಝುಳಪಿಸುವ ನದಿಯನ್ನು ನೋಡಿದಾಗ ರಾಧೆಗೆ ಹೊಳೆಯಿತು. ಜಗತ್ತಿಗೆ, ಸಮಾಜಕ್ಕೆ, ತಂದೆ- ಗಂಡ–ಅತ್ತೆ ಮಾವಂದಿರಿಗೆ, ಒಟ್ಟಿನಲ್ಲಿ ಎಲ್ಲರಿಗೂ ತಾನು ಭಾರ. ತನ್ನಂಥ ನತದೃಷ್ಟೆಯ ಬಗ್ಗೆ ತನ್ನನ್ನು ಹೊತ್ತಿರುವ ಭೂದೇವಿ ಸಹ ಏನೆಂದುಕೊಂಡಿದ್ದಾಳೋ ಎಂಬ ಕಳವಳವೂ ಅವಳನ್ನು ಬಾಧಿಸುತ್ತಿತ್ತು. ತಾಯಿಯ ನೆನಪಾಯಿತು. ಅವಳ ದುರಂತ ಚಿತ್ರವನ್ನು ನೆನೆದಳು. ತನ್ನ ಅಗಲುವಿಕೆಯಿಂದ ತಾಯಿಯ ದುಃಖ ಇನ್ನೂ ಹೆಚ್ಚುತ್ತದೆ, ಅವಳು ನೆಲ ಹಿಡಿಯುತ್ತಾಳೆ. ತಮ್ಮಂದಿರು ತಂಗಿಯರ ಗತಿ ಏನು? ತಾಯಿಗಾಗಿ ಆತ್ಮಹತ್ಯದ ಆಲೋಚನೆಯನ್ನು ತೊರೆದು ಊರಿನತ್ತ ಸಾಗಿದಳು. ಆಗಲೇ ಆರು ಗಂಟೆ ಮೀರಿತ್ತು. ಒಂಬತ್ತು ಮೈಲಿ ದಾರಿ ನಡೆಯಬೇಕು. ಎಷ್ಟೋ ಜಾಗ್ರತೆಯಾಗಿ ಕಾಲು ಹಾಕಿದರೂ ರಾತ್ರಿ ಒಂಬತ್ತು ಗಂಟೆಯಾಗುತ್ತದೆ—ಊರು ಮುಟ್ಟುವ ಹೊತ್ತಿಗೆ. ದಿನವೂ ಏಳುಗಂಟೆಯ ಹೊತ್ತಿಗೆ ರಾಧೆ ಪದ್ಮಾವತಿಯ ಮನೆಯಿಂದ ಬರುತ್ತಿದ್ದಳು. ತೀರ ತಡವಾದರೆ ಪದ್ಮಾವತಿ ಮನೆಗೆ ತನ್ನ ಮನೆಯವರು ಬರುತ್ತಾರೆ. ಪದ್ಮಾವತಿ ಏನೆಂದು ಉತ್ತರ ಕೊಡಬೇಕು? ಹೊನ್ನಾಳಿಗೆ ಹೋದ

ವಿಚಾರ ಹೇಳಬೇಕೆ ? ತನಗೇನೂ ಗೊತ್ತಿಲ್ಲ ಎಂದು ಹೇಳಬೇಕೆ ? ಅಲ್ಲದೆ ಪದ್ಮಾವತಿಯು ಮನಸ್ಸಿನಲ್ಲಿ ಎಷ್ಟು ಕುದಿಯುತ್ತಾಳೊ ? ಅವಳಿಗೆ ಅಪಶಬ್ದ ಬರಲು ತಾನು ಕಾರಣನಾಗುತ್ತದೆ ಎಂಬ ದುಃಖವೂ ಅವಳನ್ನು ಕೊರೆಯುತ್ತಿತ್ತು. ಈಗ ಎಲ್ಲವೂ ಕೈ ಮಿಂಚಿದೆ. ಆದದ್ದಾಗಲಿ ಎಂದು ಹೊರಟಳು.

ಸುಮಾರು ಅರ್ಧ ಫರ್ಲಾಂಗು ಅವಳು ದಾರಿ ನಡೆದಿರಬಹುದು. ತನ್ನ ಬಾಳಿನ ದುರಂತ ಕಥೆಯ ಬಗ್ಗೆ ಆಲೋಚಿಸುತ್ತಾ ಹೊರಟಿದ್ದಾಳೆ. ಸೀತೆ, ಸಾವಿತ್ರಿ, ದಮಯಂತಿ, ದ್ರೌಪದಿ ಮುಂತಾದ ಪುರಾಣ ಸ್ತ್ರೀಯರೊಂದಿಗೆ ತನ್ನನ್ನು ತುಲನಮಾಡಿಕೊಂಡು ನೋಡಿದಳು. ಅವಳು ಓದಿದ ಸಾಹಿತ್ಯ ಸಾಮಾನ್ಯವಾಗಿ ಈ ಸಂಬಂಧವಾಗಿಯೇ ಇದ್ದಿತು. ಈ ವ್ಯಕ್ತಿಗಳೆಲ್ಲಾ ತಮ್ಮ ಜೀವಿತದ ಯಾವುದೋ ಒಂದು ಕಾಲದಲ್ಲಿ ತೊಂದರೆ ಅನುಭವಿಸಿದವರು. ತಾನಾದರೋ ಸದಾ ದುಃಖದ ಮಡುವಿನಲ್ಲಿಯೇ ಮುಳುಗಿದ್ದಾಳೆ. ತಮ್ಮ ಕಷ್ಟ ಕಾರ್ಪಣ್ಯಗಳು ಎಂದಾದರೂ ಒಂದು ದಿನ ಹಿಂಗಬಹುದೆಂಬ ದೃಢ ನಂಬಿಕೆ ಅವರು ಕಷ್ಟಕಾಲದಲ್ಲಿದ್ದಾಗ ಅವರಿಗೆ ಇತ್ತು. ತನಗಾದರೋ ಸ್ವಪ್ನದಲ್ಲಿ ಸಹ ಆ ಆಶಾಕಿರಣ ಕಾಣುವ ಹಾಗಿಲ್ಲ. ಎಲ್ಲವೂ ಕಗ್ಗತ್ತಲಿನಿಂದ ಆವರಿಸಿದೆ. ಆ ಪುರಾಣಸ್ತ್ರೀಯರಿಗೆ ಹೆಮ್ಮೆಪಟ್ಟುಕೊಳ್ಳುವಂಥ ಗಂಡಂದಿರಿದ್ದರು ಹೆಂಡತಿಯರಿಗಾಗಿ ಎಂತಹ ತ್ಯಾಗ ಮಾಡಲೂ ಸಿದ್ಧರಿದ್ದರು ಯುದ್ಧ ಹೂಡಿ ಅಸುವು ನೀಗಲು ಸಿದ್ಧರಿದ್ದರು. ಆದರೆ ಪ್ರಾಣೇಶ.... ....? ಇಲ್ಲಿಗೆ ಅವಳ ಆಲೋಚನಾಲಹರಿ ತಟ್ಟನೆ ಕಿತ್ತು ಹರಿಯಿತು. ಕೈಹಿಡಿದ ಹೆಂಡತಿಯನ್ನು ಸಾಕಿ ಸಲಹುವ ಯೋಗ್ಯತೆ ಅವನಿಗಿಲ್ಲ. ಅವನನ್ನು ಬಯ್ಯಲು, ಶಪಿಸಲು ಅವಳಿಗೆ ಮನಸ್ಸು ಬಾರದು. ಪತಿಯೇ ಪರದೈವ ಎಂಬ ಆರ್ಯೋಕ್ತಿ ಅವಳ ಮನಸ್ಸಿನಲ್ಲಿ ನಾಟಿಹೋಗಿದ್ದಿತು. ಈಗ ನಡೆದ ಘಟನೆಗಳಿಗಿಂತ ದಾರುಣವಾದ ಘಟನೆಗಳು ಜರುಗಿದರೂ ರಾಧೆ ತನ್ನ ಗಂಡನನ್ನು ಬಯ್ಯಲು ಸಿದ್ಧಳಾಗಿರಲಿಲ್ಲ. ಇದು ಸಹ ಕರ್ಮ, ದೇವರ ಲೀಲೆ, ಹಣೆಯಬರಹ ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ, ಎಂಬ ಮಬ್ಬು ಭಾವನೆಗೆ ಅವಳು ಶರಣು ಹೋಗುವಳು.

ಈಗಲೂ ನಮ್ಮಲ್ಲಿ ಅನೇಕರಿದ್ದಾರೆ. ತಾವು ಏನಾದರೂ ಕೊಂಚ ಸಾಧಿಸಿದರೆ, ಹಣ ಗಳಿಸಿದರೆ, ಅಥವಾ ಜಂಬ ಕೊಚ್ಚಿಕೊಳ್ಳುವ ಯಾವು

ದಾದರೂ ಕೆಲಸವನ್ನು ಮಾಡಿದರೆ, ಅದು ತಾವು ಮಾಡಿದ್ದು ಎಂದು ಎದೆಯ ಮೇಲೆ ಕೈಯಿಕ್ಕಿ ಹೇಳುತ್ತಾರೆ. ಆದರೆ ಎಲ್ಲಿಯಾದರೂ ಜಾರಿದರೆ, ನಷ್ಟ ಹೊಂದಿದರೆ, ಅಥವಾ ಯಾವುದಾದರೂ ಕೆಲಸದಲ್ಲಿ ಪರಾಜಯವಾದರೆ ಅದು ಅದೃಷ್ಟವೆಂದು ಕರೆಯುತ್ತಾರೆ. ಒಟ್ಟಾರೆ ಕೆಟ್ಟದ್ದೆಲ್ಲಾ ಅದೃಷ್ಟದ ತಲೆಯ ಮೇಲೆ, ಒಳ್ಳೆಯದೆಲ್ಲಾ ತಮ್ಮ ಎದೆಯ ಮೇಲೆ.

ಮೋಟಾರ್ ಹಾರನ್ ಆದ ಶಬ್ದ ಕೇಳಿಸಿತು. ಹಟಾತ್ತನೆ ಹಿಂತಿರುಗಿ ನೋಡಿದಳು. ಬಸ್ಸೊಂದು ತನ್ನ ಬೆನ್ನು ಹಿಂದುಗಡೆ ಅತಿ ಸಮೀಪದಲ್ಲಿದ್ದುದನ್ನು ನೋಡಿದಳು. ತನ್ನ ವಿಚಾರನಾಗಿ ತಾನೇ ಮರುಕಪಟ್ಟುಕೊಳ್ಳುತ್ತ ಆಲೋಚನೆಯ ಗುಂಗಿನಲ್ಲಿ ನಡೆದಿದ್ದ ರಾಧೆಗೆ ತಾನು ರಸ್ತೆಯ ಮಧ್ಯದಲ್ಲಿ ಓಡಾಡುತ್ತಿರುವುದರ ಅರಿವಾಗಿರಲಿಲ್ಲ. ಬರುತ್ತಿದ್ದ ಬಸ್ಸು ಈಗಾಗಲೇ ದೂರದಿಂದ ಒಂದು ಬಾರಿ ಹಾರನ್ ಮಾಡಿತ್ತು. ರಸ್ತೆಯಲ್ಲಿ ಹೋಗುತ್ತಿದ್ದ ಹೆಣ್ಣುಮಗಳು ದಾರಿ ಬಿಡಬಹುದೆಂದು ಡ್ರೈವರ್ ಎಣಿಸಿದ್ದ. ಆದರೆ ಅವನ ಎಣಿಕೆ ತಪ್ಪಾಯಿತು. ಹುಡುಗಿ ರಸ್ತೆಯ ಮಧ್ಯದಲ್ಲಿ ಹೋಗುತ್ತಿದ್ದಾಳೆ. ನಾಲ್ಕು ಗಾಲಿಗಳಿಗೂ ಬ್ರೇಕ್ ಹಾಕಿ ಬಸ್ ನಿಲ್ಲಿಸಿದ. ಹಟಾತ್ತಾಗಿ ಗಾಡಿ ನಿಂತಿದ್ದರಿಂದ ಕೂತಿದ್ದ ಜನರು ಮುಂದಿನ ಸೀಟಿನಲ್ಲಿದ್ದವರ ಯೋಗಕ್ಷೇಮ ವಿಚಾರಿಸುವ ಸಂಭವ ಒದಗಿತು. ಬಸ್ಸಿನಲ್ಲಿದ್ದ ಜನ ಒಂದೇಬಾರಿಗೆ ಬೈಗಳದ ಮಳೆ ಸುರಿಸಿತು ಒಬ್ಬೊಬ್ಬರು ಒಂದೊಂದು ಮಾತನಾಡಿದರು. "ರಸ್ತೆ ಇವಳಪ್ಪನದಿರಬೇಕು" "ಮನೆಯಲ್ಲಿ ಹೇಳದೆ ಬಂದಂತಿದೆ" "ಪ್ರಾಣ ಕಳೆದುಕೊಳ್ಳಲು ಮೋಟಾರೇ ಆಗಬೇಕೆ, ಹೊಳೆ ಬಾವಿಗಳು ಇಲ್ಲವೇ ?" "ರೇರ್ಷಕಾಲ, ಅಕ್ಕಿ ಸಿಕ್ಕದಿದ್ದರೆ ಏನುಮಾಡಿಯಾಳು" ಬೈಗಳೊಂದಿಗೆ ಮೂದಲಿಕೆಯೂ ಆರಂಭವಾಯಿತು. ರಾಧೆ ತಾನು ಮಾಡಿದ ಮಹಾಪರಾಧ ಏನೆಂಬುದನ್ನು ತಿಳಿದುಕೊಂಡು, ರಸ್ತೆಯ ಪಕ್ಕಕ್ಕೆ ಸರಿದಳು. ಬಸ್ ಹೊರಡಲು ಡ್ರೈವರ್ ಮತ್ತೆ ಸ್ಟಾರ್ಟ್ ಮಾಡಿದ. "ಡ್ರೈವರ್ ಸಾಹೇಬರೇ ಸ್ವಲ್ಪ ತಡೀರಿ. ಆ ಹುಡುಗಿ ನಮ್ಮೂರಿನದಂತೆ ಕಾಣುತ್ತದೆ'' ಎಂದು ಹೇಳುತ್ತಾ ಒಬ್ಬ ದೊಡ್ಡ ಮನುಷ್ಯರು ಬಸ್ಸಿನಿಂದ ಇಳಿದರು. ಹತ್ತಿರ ಹೋಗಿ "ರಾಧಮ್ಮ, ನಮ್ಮ ಶಾನುಭೋಗರ ಮಗಳು. ನೀನು ಸ್ವಾಮತಿಗೆ ಹೊರಟಿದ್ದೀಯೇನಮ್ಮ? ಬಸ್ ಹತ್ತು, ಅದರ ಚಾರ್ಜು

ನಾನು ಕೊಡುತ್ತೇನೆ. ಎಂದು ಶ್ರೀನಿವಾಸಾಚಾರಿಯ ಪಕ್ಕದ ಮನೆಯ ಬಸಪ್ಪ ಗೌಡರು ಹೇಳಿದರು. ಅವರ ಕುಟುಂಬ ಪಾರ್ವತಮ್ಮನವರು ಬಸ್‌ನಲ್ಲಿಯೇ ಇದ್ದರು. ಹೊನ್ನಾಳಿಯಲ್ಲಿ ನಡೆದ ಯಾವುದೋ ಮದುವೆಗೆ ದಂಪತಿಗಳು ಹೋಗಿದ್ದರು. ರಾಧೆಯನ್ನು ಮೊದಲು ಗುರ್ತಿಸಿದವರೇ ಪಾರ್ವತಮ್ಮ. ತಮ್ಮ ಯಜಮಾನರಿಗೆ ರಾಧೆಯನ್ನು ಬಸ್‌ನಲ್ಲಿ ಕೂಡಿಸುವುದಕ್ಕೆ ಅವರೇ ಹೇಳಿದ್ದರು. ಶ್ರೀನಿವಾಸಾಚಾರಿಯ ವಿಷಯ ಇವರಿಗೆ ಅವರಿಗಿಂತಲೂ ಚೆನ್ನಾಗಿ ತಿಳಿದಿತ್ತು. ರಾಧೆಯನ್ನು ತಮ್ಮ ಪಕ್ಕದಲ್ಲಿಯೇ ಪಾರ್ವತಮ್ಮನವರು ಕೂಡಿಸಿಕೊಂಡರು. ರಾಧೆ ತಲೆ ತಗ್ಗಿಸಿದವಳು ಎತ್ತಲೇಯಿಲ್ಲ. ಒಂದೇ ಸಮನೆ ಅಳುತ್ತಿದ್ದಳು. ಪಾರ್ವತಮ್ಮನವರು ಕಷ್ಟಪಟ್ಟು ರಾಧೆಯಿಂದ ವಿಷಯಗ್ರಹಣ ಮಾಡಿದರು. ಮನೆಯಲ್ಲಿ ಈ ವಿಚಾರವನ್ನು ಯಾರಿಗೂ ಉಸಿರುವುದಿಲ್ಲವೆಂದು ಅಭಯ ವಚನವಿತ್ತರು. ನ್ಯಾಮತಿ ಬಂದಿತು. ಬಸಪ್ಪ ಗೌಡರು, ಪಾರ್ವತಮ್ಮ, ರಾಧೆ ಇಳಿದರು. ಆಗಲೇ ಏಳುಗಂಟೆಯ ಸಮಯ ವಾಗಿತ್ತು. ರಾಧೆ ಒಳದಾರಿಯಿಂದ ನೇರವಾಗಿ ಪದ್ಮಾವತಿಯ ಮನೆಗೆ ಹೋದಳು. ಅಲ್ಲಿ ಸಹ ಅವಳಾವ ಮಾತನ್ನೂ ಆಡಲಿಲ್ಲ. ಏನು ನಡೆದಿರ ಬಹುದೆಂಬುದನ್ನು ಪದ್ಮಾವತಿ ಊಹಿಸಲು ಹೆಚ್ಚು ಹೊತ್ತು ಬೇಕಾಗಲಿಲ್ಲ. "ಅಂತೂ ನೀನು ಬಂದೆಯಲ್ಲ, ಅಷ್ಟೇಸಾಕು. ನೀನು ಹೋದ ಕೆಲಸ ಆಗೋಲ್ಲ ಎಂದು ನನಗೆ ಗೊತ್ತಿತ್ತು. ನೀನು ಇನ್ನೇನಾದರೂ ಮಾಡಿಕೊಂಡೀಯೆಂದು ಹೆದರಿಕೆಯಾಗಿತ್ತು. ದೇವರೆನ್ನುವವನು ಒಬ್ಬನು ಇದ್ದರೆ ನಿನ್ನ ಮೇಲಲ್ಲದೆ ಇನ್ನಾರ ಮೇಲೆ ಕರುಣೆ ತೋರಬೇಕು...."

ಇಷ್ಟು ಹೊತ್ತಿಗೆ ರಾಧೆಯ ತಮ್ಮ ಕರೆಯಲು ಬಂದ. "ನೀನು ಎಷ್ಟು ಹೊತ್ತಾದರೂ ಬರಲಿಲ್ಲ. ಅಮ್ಮ ಕರೆದುಕೊಂಡು ಬರಲು ಹೇಳಿದಳು"

ರಾಧೆ ಕಣ್ಣೊರಸಿಕೊಂಡು ಮನೆ ಸೇರಿದಳು.

ಪದ್ಮಾವತಿ ಮನೆಯೆದುರಿದ್ದ ಮರವನ್ನು ದಿಟ್ಟಿಸಿ ನೋಡುತ್ತ ತನ್ನನ್ನು ತಾನು ಮರೆತಿದ್ದಳು.

"ಮಹರಾಯ ಏನು ಮದುವೆ ಮಾಡುತ್ತಿದ್ದಾನಪ್ಪ. ನನ್ನೀ ಆಯಸ್ಸಿಗೆ ಸಹಸ್ರಾರು ಮದುವೆಗಳನ್ನು ಮಾಡಿಸಿದ್ದೇನೆ, ಮಾಡಿದ್ದೇನೆ. ಆದರೆ ಇಂಥಾ ಮದುವೆಯನ್ನ ಈ ಜನ್ಮದಲ್ಲಿಯೇ ನೋಡಲು ಸಾಧ್ಯವಿಲ್ಲ. ಧನ್ಯನಪ್ಪಾ, ನೀನು.'' ಇವು ಮಾಧವಾಚಾರಿಯ ಬಾಯಿಂದ ಹೊರಟ ಮುಕ್ತಾಫಲಗಳು. ಹೊಗಳುವುದಾಗಲೀ, ಬೊಗಳುವುದಾಗಲಿ, ಎರಡಕ್ಕೂ ಮಿತಿಯಿಲ್ಲ.

ವೆಂಕೋಬಾಚಾರಿ ಒಂದು ದೊಡ್ಡ ಒರಗುದಿಂಬಿಗೆ ಒರಗಿಕೊಂಡು ಕುಳಿತಿದ್ದಾನೆ. ಈ ಕೆನ್ನೆಯಿಂದ ಆ ಕೆನ್ನೆಯವರೆಗೆ ಅಳಿಸಲಾರದ ನಗುವೊಂದು ನರ್ತಿಸುತ್ತಿದೆ, ಸಂತೋಷ ಉಕ್ಕಿ ಚಿಮ್ಮುತ್ತಿದೆ. ಜರತಾರಿ ಪಂಚೆ ಉಟ್ಟಿದ್ದಾನೆ. ಮಲ್ಲು ಬನಿಯನ್, ಒಳಗಡೆ ಜನಿವಾರ, ಎದೆಯ ಮೇಲಿನ ಅಕ್ಕಿ ಎಳ್ಳು ಮಿಶ್ರಿತ ಬಣ್ಣದ ಕೂದಲು, ಕಾಣುತ್ತಿವೆ. ಮೂರು ಅಂಗುಲ ದಪ್ಪದ ಜರತಾರಿ ಶಲ್ಯವೊಂದನ್ನು ಹಾಗೆಯೇ ಭುಜದಿಂದ ಇಳಿಯಬಿಟ್ಟಿದ್ದಾನೆ. ಚಕ್ಕಳಮಕ್ಕಳ ಹಾಕಿ ಕೂತಿರುವ ಅವನ ಮುಖಕ್ಕೆ ಸೊಂಡಿಲೊಂದು ಇದ್ದಿದ್ದರೆ. ಜೀವಂತ ಗಣೇಶ ಎಂದು ಹೇಳಬಹುದು. ತೃಪ್ತಿಯೇ ಮೂರ್ತಿವತ್ತಾಗಿ ಕೂತಂತಿದೆ.

"ಈರಣ್ಣನ ಮುಂದೆ ಬಸವಣ್ಣ'' ಎಂಬಂತೆ ಮಾಧವಾಚಾರಿ ಕುಕ್ಕರುಗಾಲಿನಲ್ಲಿ ವೆಂಕೋಬಾಚಾರಿ ಎದುರಿಗೆ ಕೂತುಕೊಂಡಿದ್ದಾನೆ. ಭಾರಿ ಯುದ್ಧದಲ್ಲಿ ಇಬ್ಬರೂ ಗೆಲುವು ಪಡೆದಿದ್ದಾರೆ. ಯುದ್ಧದಲ್ಲಿ ತಾವು ಯಾವ ಯಾವ ರೀತಿ ಕೈಚಳಕ ನಡೆಸಿದೆವೆಂಬುದನ್ನು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಿದ್ದಾರೆ.

ಇವರಿಬ್ಬರು ಹಜಾರದಲ್ಲಿ ಕೂತಿದ್ದಾರೆ. ಹೊರಗಡೆ ಓಲಗದ ಶಬ್ದ. ಇದು ಉತ್ತರ ಕರ್ನಾಟಕದ ಓಲಗ. ಇದು ದಕ್ಷಿಣದ ಓಲಗದಂತಿರುವುದಿಲ್ಲ. ಏನೋ ಬಾರಿಸಬೇಕು. ಬಾರಿಸಿದರಾಯಿತು. ಉತ್ತರ ಕರ್ನಾಟಕದ ನಾಟಕಗಳ ಮಟ್ಟಿನ ಕೆಲವು ಹಾಡುಗಳನ್ನು ಊದುತ್ತಿರುತ್ತಾರೆ. ದಕ್ಷಿಣದವರಂತೆ ಶಾಸ್ತ್ರೋಕ್ತವಾಗಿ ಯಾರೂ ಅಭ್ಯಾಸಮಾಡಿರುವುದಿಲ್ಲ. ಹೊರಗಡೆ

ಮದುವೆಯ ಚಪ್ಪರ. ಜನ ಸಮೂಹ ಸೇರಿದೆ ಹಿಂದಿನ ದಿನ ಧಾರೆಯಾಗಿದ್ದು, ಈ ದಿನ ನಾಗವಲ್ಲಿ ಕಾರ್ಯಕ್ರಮಗಳು ಜರುಗುತ್ತಿವೆ. ವಿಜಯಶ್ರೀಯು ಕೊನೆಗೂ ವೆಂಕೋಬಾಚಾರಿಯ ಕೊರಳಿಗೆ ಮಾಲೆ ಹಾಕಿದ್ದಾಳೆ. ಅವನ ಛಲದ ಮುಂದೆ ಅಭಿಮಾನಧನನಾದ ದುರ್ಯೋಧನನ ಛಲ ಒಂದು ಸುತ್ತು ಕಡಿಮೆಯೆಂದೇ ಹೇಳಬೇಕು.

ಶ್ರೀನಿವಾಸಾಚಾರಿಯಿಂದ ಹಣ ಬಾರದ್ದರಿಂದ ವೆಂಕೋಬಾಚಾರಿ ಮಾಧವಾಚಾರಿಯಮೇಲೆ ತುಂಬಾ ಕೋಪಗೊಂಡ. ಅಲ್ಲದೆ ಮಾಧವಾಚಾರಿ ವೆಂಕೋಬಾಚಾರಿಯ ಒಂದು ನೂರು ರೂಪಾಯಿಗೆ ಎಳ್ಳು ನೀರು ಬಿಟ್ಟಿದ್ದ. ಹಣ ಹೋದದ್ದಕ್ಕಿಂತ ಹೆಚ್ಚಾಗಿ ಯಃಕಶ್ಚಿತ ಮಾಧವಾಚಾರಿಯಿಂದ ಮೋಸ ಹೋದದ್ದು ವೆಂಕೋಬಾಚಾರಿಯ ಪಕ್ಕೆಯಲ್ಲಿ ಕುಕ್ಕಿದಂತಾಗಿತ್ತು. ಶ್ರೀನಿವಾಸಾಚಾರಿ – ಮಾಧವಾಚಾರಿ ಹೂಡಿದ ಕಪಟ ನಾಟಕದ ಸಂಪೂರ್ಣ ಅಂತರಾರ್ಥದ ಅರಿವಾಯಿತು ಇವರಿಬ್ಬರಿಗೂ ಬುದ್ಧಿ ಕಲಿಸಬೇಕೆಂದು ವೆಂಕೋಬಾಚಾರಿ ಅಂದೇ ನಿಶ್ಚೈಸಿದ ಪ್ರಾಣೇಶನಿಗೆ ಬೇರೆಬೇರೆ ಕಡೆ ಕನ್ಯೆಗಳನ್ನು ಹುಡುಕಲಾರಂಭಿಸಿದ ಆದರೆ ಪ್ರಾಣೇಶನಿಗೆ ಮದುವೆಯಾದ ವಿಚಾರ, ರಾಧೆಯನ್ನು ಹಣಕ್ಕಾಗಿ ಬಲಿಕೊಟ್ಟ ವಿಚಾರ ಜನಜನಿತವಾಯಿತು. ಯಾರೂ ಹೆಣ್ಣು ಕೊಡಲು ಮುಂದೆ ಬರಲಿಲ್ಲ. ಅಂಥದ್ದರಲ್ಲಿಯೂ ಒಂದೆರಡು ಬೀಳು ಬೀಕಲು ಕನ್ಯೆಗಳು ಬಂದಿದ್ದವು ಇವು ಎಲ್ಲಿಯೂ ಖರ್ಚಾಗದ್ದರಿಂದ ಪ್ರಾಣೇಶನ ಕೋಮಲ ಕೊರಳಿಗೆ ಮಾಲೆ ಹಾಕಲು ಸಿದ್ಧವಾಗಿದ್ದವು. ಅಲ್ಲದೆ ಈ ಹುಡುಗಿಯರ ತಂದೆಯರು ಶ್ರೀನಿವಾಸಾಚಾರಿಗಿಂತ ಕಡುಬಡವರಿದ್ದರು. ಇವರಾರೂ ವೆಂಕೋಬಾಚಾ ಆಶಿಸಿದಷ್ಟು ಹಣ ಕೊಡಲು ಯೋಗ್ಯತೆ ಉಳ್ಳವರಾಗಿರಲಿಲ್ಲ ಹೀಗಾಗಿ ಪ್ರಾಣೇಶ ಮದುವೆಯಾದ ಬ್ರಹ್ಮಚಾರಿಯಾಗಿಯೇ ಇದ್ದ.

ಎಲ್ಲಿಯೂ ವರ ಸಿಕ್ಕದೆ ಊರು ಊರು ತಿರುಗಿ ಕೆಲವರು ಕನ್ಯಾಪಿತೃಗಳು ವೆಂಕೋಬಾಚಾರಿಯ ಕೈಗೆ ಸಿಕ್ಕಿದರು. ಆದರೆ ಊರಿನ ಕಿಡಿಗೇಡಿಗಳು ವಾಸ್ತವಿಕ ವಿಷಯವನ್ನು ಅವರ ಮುಂದಿಡುತ್ತಿದ್ದರು "ಆ ಹುಡುಗ ನಿಮಗೆ ಅಷ್ಟು ಬೇಡವಾಗಿದ್ದರೆ ಸೇತುವೆಯಿಂದ ಕೆಳಕ್ಕೆ ಹಾಕಿಬಿಡಿ'' "ಗಿಳಿ ಸಾಕಿ ಬೆಕ್ಕಿನ ಕೈಗೆ ಕೊಟ್ಟಂತಾಗುತ್ತದೆ. ಆ ಹುಡುಗನಿಗೇಕೆ ನಿಮ್ಮ

ಮಗಳನ್ನು ಧಾರೆ ಎರೆಯುತ್ತೀರಿ. ಯಾವನಾದರೂ ದುಡಿಯುವ ಬಡವನಿಗೆ ಕೊಡಿ'' "ವೆಂಕೋಬಾಚಾರಿಯಂಥ ರಾಕ್ಷಸನ ಮನೆಗೆ ಕನ್ಯಾ ಕೊಟ್ಟೀರಿ ಜೋಕೆ'' ಇಂಥ ಎಚ್ಚರಿಕೆ ಮಾತುಗಳನ್ನು ಕೇಳಿದ ಯಾವ ವೀರ ತಂದೆ ಈ ಮನೆಗೆ ತನ್ನ ಮಗಳನ್ನು ಬಲಿ ಕೊಟ್ಟಾನು ?

ವೆಂಕೂಬಾಯಿಯವರ ತೊಂದರೆಗಳು ದಿನದಿನಕ್ಕೆ ಹೆಚ್ಚುತ್ತ ಹೋದವು. ಗಂಡನಿಗೆ ಬುದ್ಧಿ ಹೇಳಿದರು, ಸಿಟ್ಟುಮಾಡಿಕೊಂಡರು. ಸ್ತ್ರೀಯರಿಗೆ ದೇವರು ವರಪ್ರದಾನ ಮಾಡಿರುವ ಅಶ್ರು ಅಸ್ತ್ರವನ್ನು ಪ್ರಯೋಗಿಸಿದರು. ಆದರೂ ವೆಂಕೋಬಾಚಾರಿಯ ಮನ ಕರಗಲಿಲ್ಲ "ಪ್ರಾಣೇಶನಿಗೆ ಹೆಣ್ಣಿನ ಮಾಲೆ ಯನ್ನೇ ತಂದು ಹಾಕುತ್ತೇನೆ. ನನ್ನ ಸಮಾನ ಯಾರಿದ್ದಾರೆ''–ಸೊಸೆಯ ವಿಷಯ ಪ್ರಸ್ತಾಪಕ್ಕೆ ಬಂದಾಗಲೆಲ್ಲ ವೆಂಕೋಬಾಚಾರಿ ಈ ರೀತಿ ಗುಡುಗು ತ್ತಿದ್ದ. ಪ್ರಾಣೇಶನಿಗೂ ತಲೆ ತಿರುಗಿತು. "ಊರಲ್ಲಿ ನಾನು ಮರ್ಯಾದೆ ಯಿಂದ ತಿರುಗಾಡುವುದು ಕಷ್ಟವಾಗಿದೆ. ಕಂಡ ಕಂಡವರೆಲ್ಲ ದೂರುತ್ತಾರೆ. ಅವಳನ್ನೆ (ರಾಧೆಯನ್ನೆ) ಮನೆಗೆ ತಂದರಾಯಿತು'' ಎಡಗೈಯಲ್ಲಿ ಜೀವ ಹಿಡಿದುಕೊಂಡು ಪ್ರಾಣೇಶ ಹೇಳಿದ.

ಹೆಡೆ ತುಳಿದ ನಾಗರಹಾವಿನಂತೆ ವೆಂಕೋಬಾಚಾರಿ ಸಿಡಿದೆದ್ದ. ಬುಸು ಗುಟ್ಟಿದ. ತನ್ನ ದೇಹದಲ್ಲಿ ಪ್ರಾಣವಾಯು ಇರುವವರೆಗೆ ಆ....ಂಡೆ ತನ್ನ ಮನೆ ಹೊಸಿಲನ್ನು ದಾಟಕೂಡದೆಂದು ಆರ್ಭಟಿಸಿದ ವೆಂಕೂಬಾಯಿಯವರು ಮಧ್ಯೆ ತಲೆಹಾಕಿ ತುಂಬಾ ಬೈಸಿಕೊಂಡರು. ಮನೆ ಹಗರಣದ ಬೀಡಾಯಿತು.

ಈ ಹಿಂದೆಯೇ ಹೊನ್ನಾಳಿ ಒಂದು ಕ್ಷೇತ್ರವೆಂದೂ, ಅಲ್ಲಿಗೆ ದೂರ ದೇಶ ದಿಂದ ಭಕ್ತಾದಿಗಳು ಬಂದು ಹೋಗುತ್ತಿದ್ದರೆಂದು ಹೇಳಲಾಗಿತ್ತಷ್ಟೆ. ಒಂದು ಸಾರಿ ಬಿದರಹಳ್ಳಿ ದೇಸಾಯಿಯವರು ರಾಯರ ಸೇವೆಗೆಂದು ಬಂದಿ ದ್ದರು. ಅವರ ಪರಿವಾರ ಬಸ್‌ಸ್ಟ್ಯಾಂಡಿನಲ್ಲಿ ಇಳಿದಾಗಲೇ ಮಾಧವಾಚಾರಿ ಅವರಿಗೆ ತಾಗಿದ. ದೇಸಾಯಿಯವರ ಹುಡುಗನೊಬ್ಬನಿಗೆ ಮೂರ್ಛೆರೋಗ ಬರುತ್ತಿದ್ದರಿಂದ ಸೇವೆಗಾಗಿ ಅವರು ಬಂದಿದ್ದರು. ಅವರ ಊಟೋಪಚಾರ ಗಳಿಗೆಲ್ಲ ಮಾಧವಾಚಾರಿ ತನ್ನ ಮನೆಯಲ್ಲೇ ಏರ್ಪಾಟು ಮಾಡಿದ. ಹೊನ್ನಾಳಿ ಕ್ಷೇತ್ರದ ಮಹಿಮೆಯನ್ನು ಅವರು ಕಿವಿಕೊಟ್ಟಾಗಲೆಲ್ಲ ಹೇಳು ತ್ತಿದ್ದ. ದೇಸಾಯಿಯವರು ಮಾಧವಾಚಾರಿಯ ಸೇವೆಗೆ ಸಂಪ್ರೀತರಾದರು.

ಅವರು ತಮ್ಮ ಸೇವಾವಧಿ ಏಳು ದಿನಗಳು ಮುಗಿದ ನಂತರ ಊರಿಗೆ ಹೋಗುವ ಮುನ್ನ, ಮಾಧವಾಚಾರಿಗೆ ಒಂದು ಜೊತೆ ಪಂಚೆ, ಮೇಲೆ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟಿದ್ದರು.

ಆ ಯಾತ್ರೆಗೆ ದೇಸಾಯಿಯವರ ಕುಟುಂಬ ವರ್ಗವೆಲ್ಲ ಬಂದಿದ್ದಿತು. ಅವರ ಹಿರಿಯ ಮಗ, ಮೂರು ಜನ ಹೆಣ್ಣು ಮಕ್ಕಳು (ಮದುವೆಯಾದವರು) ಇನ್ನೊಂದು ಹದಿನಾಲ್ಕು ವರ್ಷದ ಹುಡುಗಿ—ಈ ಹುಡುಗಿಯ ಹೆಸರು ಗೋಧೂ ಅಥವಾ ಗೋದಾವರಿ. ಇವಳಿಗೆ ಇನ್ನೂ ಮದುವೆಯಾಗಿರಲಿಲ್ಲ – ದೇಸಾಯಿಯವರ ಹೆಂಡತಿ, ಅಡಿಗೆಯವನು, ಒಬ್ಬ ಆಳು ಮಗ ಮತ್ತು ಮೂರ್ಛೆರೋಗ ಬರುತ್ತಿದ್ದ ಕೊನೆಯ ಹುಡುಗ. ಇವನಿಗೆ ಹತ್ತು ವರ್ಷ ಮಾತ್ರ ವಯಸ್ಸು. ದೇಸಾಯಿಯವರು ತುಂಬಾ ವತನದಾರರು. ಆದರೆ ಮೂರು ಜನ ಹೆಣ್ಣು ಮಕ್ಕಳ ಮದುವೆಗೆ ಅರ್ಥಾತ್ ವರದಕ್ಷಿಣೆಗೆ ಹೊಲಗಳನ್ನು ಮಾರಿ ಸುಸ್ತಾಗಿದ್ದರು. ಕಡೆಯ ಹುಡುಗಿ ಗೋಧೂನ ಸುಲಭವಾಗಿ, ಅಗ್ಗವಾಗಿ ಸಾಗಹಾಕಬೇಕೆಂದು ವಿಧಿಯಿಲ್ಲದೆ ಆಲೋಚಿಸಿದ್ದರು.

ಮಾಧವಾಚಾರಿ ಆಗಲೇ ಬಹಳ ದೂರವಾಗಿ ಆಲೋಚಿಸಿದ್ದ. ಬಹು ದೂರವಾಗಿ ಬಲೆ ಬೀಸಬೇಕೆಂದು ಸಂಕಲ್ಪಿಸಿದ್ದ. ದೇಸಾಯಿಯವರು ಔಪಚಾರಿಕವಾಗಿ ಹೇಳಿದ್ದರು!

''ಮಾಧವಾಚಾರ್ರೇ, ನಿಮ್ಮ ಉಪಕಾರ ನಮ್ಮ ಮೇಲೆ ಬಹಳವಾಯಿತು. ನೀವು ನಮಗೆ ಭೆಟ್ಟಿಯಾಗದಿದ್ದರೆ ನಾವು ಅದೆಷ್ಟು ತೊಂದರೆಗೆ ಈಡಾಗುತ್ತಿದ್ದೆವೋ. ಎಲ್ಲವೂ ಹೂವಿನ ಸರ ಎತ್ತಿದಷ್ಟು ಸುಲಭವಾಯಿತು. ಒಂದು ಸಾರಿ ನಮ್ಮ ಪ್ರಾಂತದ ಕಡೆ ಬನ್ನಿ''

ಮಾಧವಾಚಾರಿ ಒಂದೂವರೆ ಕಣ್ಣನ್ನು ಹಾರಿಸಿ, ಹೋತನ ಗಡ್ಡವನ್ನು ನೀವುತ್ತ ಹೇಳಿದ್ದ "ನಿಮ್ಮ ಅಭಿಮಾನ ಅಷ್ಟು ಬಲವತ್ತರವಾಗಿದ್ದರೆ ಅದೇ ನನ್ನನ್ನು ಕರೆಯಿಸಿಕೊಳ್ಳುತ್ತದೆ.''

ಬಿದರಹಳ್ಳಿಗೆ ಸಂವಸಿ, ಗುಡಗೇರಿ, ಕುಂದಗೋಳ, ಲಕ್ಷ್ಮೇಶ್ವರ ಎಲ್ಲಿಂದ ಹೋದರೂ ಮೂವತ್ತು ಮೈಲಿ. ಹಾವೇರಿ, ಕರ್ಜಗಿ ಸ್ಟೇಷನ್ ಗಳಿಂದಲೂ ಇಲ್ಲಿಗೆ ಹೋಗಬಹುದು. ಇದು ಸಾಂಗ್ಲಿ ಸಂಸ್ಥಾನಕ್ಕೆ ಸೇರಿದ್ದು. ಇಲ್ಲಿ ಸಹ ತುಂಗಭದ್ರಾ ನದಿ ಹರಿಯುತ್ತದೆ. ಇದರ ಎದಿರು

ಹಿಂದೆ ಮದ್ರಾಸ್ ಇಲಾಖೆಯ ಬಳ್ಳಾರಿ ಜಿಲ್ಲೆಗೆ ಸೇರಿದ್ದು. ಬಿಸರಹಳ್ಳಿಯ ಸುತ್ತಲೂ ಧಾರ್ವಾಡ ಜಿಲ್ಲಾ ಪ್ರದೇಶಗಳು. ಇದು ಹೇಗೆ ಎಂದು ನನ್ನನ್ನು ಕೇಳಬೇಡಿ. ಬ್ರಿಟಿಷ್ ಆಳರಸರು ದೇಶವನ್ನು ಹರಿದು ಹಂಚಿದಾಗ ನಡೆದ ಸೋಜಿಗವಿದು ದೆ ಸಾಯಿಯವರಿಗೆ ಊರಿಗೆ ಸೇರಿರ ವ ಮುಕ್ಕಾಲು ಭಾಗ ಜಮೀನುಗಳೆಲ್ಲ ಸೇರಿವೆ ಆದರೆ ಮನೆ ತುಂಬ ಜನ ಅವರು ಯಾರು. ಯಾರು, ತಮಗೆ ಹೇಗೆ ಸಂಬಂಧವಾಗಬೇಕೆನ್ನುವುದು ಅವರಿಗೆ ಗೊತ್ತಿಲ್ಲ. ಅಷ್ಟು ಜನಕ್ಕೂ ಪಡಿ ಅಳೆಯಬೇಕು. ಇದರ ಜೊತೆಗೆ ಒಬ್ಬೊಬ್ಬ ಮಗಳಿಗೆ ಐದು–ಆರು ಸಾವಿರ ರೂಪಾಯಿಗಳಂತೆ ವರದಕ್ಷಿಣೆ ತೆತ್ತು, ಆ ಮಾನದ ಮೇಲೆ ಮದುವೆಮಾಡಿಕೊಟ್ಟದ್ದರು ತಮ್ಮ ಮಗನಿಗೆ ಇದೇ ರೀತಿಯಾಗಿ ವರದಕ್ಷಿಣೆ ತೆಗೆದುಕೊಳ್ಳಬೇಕೆಂದು ಅವರು ಹವಣಿಸಿದ್ದರು. ಆದರೆ ಅವರ ಕುಟುಂಬ ತಮ್ಮ ತವರುಮನೆ ಕಡೆಯಿಂದ ಒಂದು ಕನ್ಯಾ ತರಲು ಹಟ ಹಿಡಿದರು. ಇದರಿಂದ ಯಾವ ಹಣವೂ ಬರಲಿಲ್ಲ. ಹೆಣ್ಣು ಮಕ್ಕಳ ಲಗ್ನವನ್ನು ದೇಸಾಯಿಯವರು ಬಹಳ ಅದ್ಧೂರಿಯಿಂದ ಮಾಡಿದ್ದರು.

ಆ ಲಗ್ನಗಳಲ್ಲಿ ಉಂಡೆಗಳ ತಯಾರಿಕೆ ಮತ್ತು ಅದನ್ನು ತಿನ್ನುವುದೇ ಒಂದು ಅತಿ ದೊಡ್ಡ ಪ್ರಸಂಗವಾಗಿರುತ್ತದೆ. ಬೀಗರ ಕಡೆಯವರು ಭೋಷಣಕ್ಕೆಂದು ಉಂಡೆ ತಿನ್ನುವ ಕದೀಮರನ್ನು ತಮ್ಮ ಪರಿವಾರದೊಂದಿಗೆ ಕರೆದುಕೊಂಡು ಬಂದಿರುತ್ತಾರೆ. ಅನ್ನ ಸಾರಿನ ಊಟದ ಶಾಸ್ತ್ರವಾದ ಮೇಲೆ ಉಂಡೆ ತಿನ್ನಲು ಎಲ್ಲರೂ ತೋಳೇರಿಸುತ್ತಾರೆ. ಪ್ರತಿಯೊಬ್ಬರೂ ತಮ್ಮ ಯೋಗ್ಯತಾನುಸಾರ ಇಳಿಸುತ್ತಾರೆ. ನಾನೊಬ್ಬ ಉಂಡೆ ತಿನ್ನುವ ಕದೀಮನನ್ನು ನೋಡಿದ್ದೇನೆ. ಆ ಮಹಾರಾಯ ಅರವತ್ತೆರಡು ಉಂಡೆಗಳನ್ನು ಅಂದು ತಿಂದಿದ್ದ. ಹಾಗೆ ಅವನು ಸಂತರ್ಪಣೆ ಊಟಗಳಲ್ಲಿ ಅಷ್ಟು ಉಂಡೆಗಳನ್ನು ತಿನ್ನುವುದು ಸ್ವಾಭಾವಿಕವೆಂದು ಅವನ ಊರಿನವನು ನನಗೆ ಹೇಳಿದರು. ಉಳಿದವರು ಸಹ ಹತ್ತರಿಂದ ಆರಂಭವಾಗಿ ಮುವ್ವತ್ತರವರೆಗೂ ಮಜಲು ಮುಟ್ಟುತ್ತಾರೆ. ಮೊದಲೇ ದೇಸಾಯಿಯವರ ಮನೆ. ಉಂಡೆ ತಿನ್ನಲು ಅವರೂರಿನವರೇ ಅಲ್ಲದೆ, ಅಕ್ಕಪಕ್ಕದ ಊರಿನವರೂ ಸಿದ್ಧರಾಗಿದ್ದರು ದೇಸಾಯಿಯವರು ಮಾಡಿದ ಮೂರು ಮದುವೆಗಳಲ್ಲೂ ಈ ಜನರು ತಮ್ಮ ಉಂಡೆಯ ದಾಹವನ್ನು ಬಹುಮಟ್ಟಿಗೆ ತಣಿಸಿಕೊಂಡಿದ್ದರು. ಉಂಡೆ ಕರಗಿದಂತೆ

ದೇಸಾಯಿಯವರ ಗಂಟು ಸಹ ಕರಗುತ್ತ ಬಂದಿತ್ತು. ಇದಲ್ಲದೆ ಅವರ ಮನೆ ತುಂಬ ನೆಂಟರಿಷ್ಟರು ತುಂಬಿಯೇ ಇರುತ್ತಿದ್ದರು. ಈ ಬೃಹದ್ ಸಂಸಾರ ಸಾಗಿಸಲು ದೇಸಾಯಿಯವರು ವರ್ಷ–ಎರಡು ವರ್ಷಕ್ಕೊಮ್ಮೆ ಹೊಲಗಳನ್ನು ಮಾರುತ್ತಿದ್ದರು. ಮೊದಲಿನಿಂದಲೂ ನಡೆದುಕೊಂಡು ಬಂದ ಸಂಪ್ರದಾಯಗಳನ್ನು ಬಿಡುವಹಾಗಿಲ್ಲ. ಇವರ ಹಿರಿಯರು ಇದಕ್ಕಿಂತಲೂ ಹೆಚ್ಚು ಅನ್ನದಾನ ನಡೆಸುತ್ತಿದ್ದರು ಇವರು ಇಷ್ಟಾದರೂ ನಡೆಸಬೇಡವೆ?

* * * *

"ಧರ್ಮ ಕರ್ಮ ಸಂಯೋಗವಾಯಿತೆಂದರೆ ಏನು ಬೇಕಾದ್ದು ಆಗುತ್ತದೆ. ನನ್ನ ಕನಸಿನಲ್ಲಿ ಸಹ ನಾನು ಇಲ್ಲಿಗೆ ಬರುತ್ತೇನೆಂದು ತಿಳಿದಿರಲಿಲ್ಲ. ಆದರೆ ದೇವರ ಇಚ್ಛೆ ನನ್ನನ್ನು ಇಲ್ಲಿಗೆ ತಂದು ಬಿಟ್ಟಿತು. ನಾನು ಹೊರಟದ್ದು ಎಲ್ಲಿಗೊ, ಬಂದದ್ದು ಎಲ್ಲಿಗೊ, ಎಲ್ಲಾ ಅವನ ಚಿತ್ತ" ....ಹಸಿವೆ ಚೀಲವನ್ನು ಇಳಿಸುತ್ತಾ ಮಾಧವಾಚಾರಿ ಒಂದು ಕಣ್ಣನ್ನು ಮುಚ್ಚಿ ಹೇಳಿದ. ದೇಸಾಯಿಯವರು ಆದೇ ಸ್ನಾನಮಾಡಿ ಪಂಚೆ ಉಟ್ಟುಕೊಳ್ಳುತ್ತಿದ್ದರು. ಹಾಲು ಬಣ್ಣದ ಪಂಚೆಯದು. ಎರಡು ಕೈಗಳಿಂದಲೂ ಕಚ್ಚೆಯನ್ನು ತೀಡುತ್ತಿದ್ದರು.

"ಅಭಿಮಾನ ಅಂದರೆ ಹೀಗಿರಬೇಕು. ಕಾಲಿಗೆ ದೂರವಾದರೆ ಮನಸ್ಸಿಗೆ ದೂರವೇನು? ಅಂತೂ ನೀವು ನಮ್ಮಲ್ಲಿಗೆ ಬಂದದ್ದು ಬಹಳ ಸೆಟ್ಟಿಗಾಯಿತು. ಏಯ್, ಯಾರಿದ್ದೀರಿ .... ....ಆಚಾರ್ಯರಿಗೆ ಮಣೆ ಹಾಕಿ .... ..."

"ನಮ್ಮೂರಿನಲ್ಲಿ ಒಂದು ಮಾರುತಿ ದೇವಾಲಯ ಕಟ್ಟಿಸಬೇಕೆಂಬುದು ನಮ್ಮ ಹಿರಿಯರ ಸಂಕಲ್ಪವಾಗಿತ್ತು. ಅದು ಈಡೇರುವುದರೊಳಗೆ ಅವರು ವೈಕುಂಠವಾಸಿಗಳಾದರು ಅದನ್ನು ಪೂರೈಸಬೇಕೆಂದು ನಾನು ಬಹಳ ದಿನಗಳಿಂದ ಆಲೋಚನೆ ಮಾಡಿದ್ದೆ ಆದರೆ ನಾನು ಒಬ್ಬಂಟಿಗ. ಅಲ್ಲದೆ ಸಂಸಾರ ತಾಪತ್ರಯ. ಹೀಗಾಗಿ ದೇವರ ಕೆಲಸ ನೆನೆಗುದಿಗೆ ಬಿತ್ತು. ಹೋದ ಹುಣ್ಣಿಮೆ ಸಾಕ್ಷಾತ್ ಮಾರುತಿರಾಯನೇ ನನ್ನ ಸ್ವಪ್ನದಲ್ಲಿ ಬಂದು, 'ಏನಪ್ಪಾ, ನನಗೆ ನಿಲ್ಲಲು ಸ್ಥಳ ಕೊಡುವುದಿಲ್ಲವೇನು?' ಅಂತ ಕೇಳಿದಾಗ ಮಾರನೆದಿನವೇ ದೇವಸ್ಥಾನದ ಕೆಲಸಕ್ಕೆ ಆರಂಭಿಸಿದೆ. ಆದರೆ ನಾನು

ಹೇಳಿ ಕೇಳಿ ಬಡವ. ನನ್ನಂಥವನು ಇಷ್ಟು ದೊಡ್ಡ ಕೆಲಸಕ್ಕೆ ಕೈಹಾಕಬಾರದು. ಆದರೆ ನಿಮ್ಮಂಥ ಪುಣ್ಯವಂತರ ಸಹಾಯದಿಂದ ಇಂಥ ಮಹತ್ಕಾರ್ಯಗಳು ಜರುಗಬೇಕು. ಇದಕ್ಕಾಗಿ ದೇಶಾವರ ಎತ್ತಲು ಹೊರಟಿದ್ದೆ. ಆದರೇನು ದೇಸಾಯಿಯವರೇ, ದುರ್ದಿನಗಳು ಬಂದಿವೆ. ನಾಟಕ, ಹೋಟೆಲು, ಸಿನಿಮಾಗಳಿಗೆ ದುಡ್ಡು ಕೊಡುತ್ತಾರೆ. ನಮ್ಮಂತವರು ದೇವಸ್ಥಾನ ಕಟ್ಟಿಸುತ್ತೇವೆಂದರೆ ಯಾರು ಕೊಡುತ್ತಾರೆ..........ಹ್ಹ ಹ್ಹ ಹ್ಹ ....'' ಎಂದು ದೇಶಾವರದ ನಗುವನ್ನೇ ಮಾಧವಾಚಾರಿ ಬೀರಿದ. ಹಾಕಿದ್ದ ಮಣೆಯ ಮೇಲೆ ಲಕ್ಷಣವಾಗಿ ಕೂತ.

"ಆಚಾರ್‍ರೇ, ನಿಮಗೂ ಎಲ್ಲ ವಿಚಾರ ಗೊತ್ತಿರಲಿಕ್ಕೆ ಸಾಕು. ಕಾಲ ಕಠಿಣವಾಗಿದೆ. ಹೂವು ಕೊಡುವಲ್ಲಿ ಎಸಳನ್ನಾದರೂ ಕೊಡಬೇಕು. ದೇವಕಾರ್ಯ ಅಂದ ಮೇಲೆ ನಮ್ಮ ಕೈಲಾದದ್ದು ಕೊಡುತ್ತೇವೆ.'' ದೇಸಾಯಿಯವರು ಗಂಭೀರವಾಗಿ ಹೇಳಿದರು.

ಆಚಾರ್‍ಯರ ಸ್ನಾನವಾಯಿತು. ಆಹ್ನೀಕ, ಮಂತ್ರಗಳ ಕಲಾಪವನ್ನು ತುಂಬಾ ಬೆಳಸಿದರು. ದಿನಕ್ಕಿಂತಲೂ ಹೆಚ್ಚಿನ ನಾಮ ಮುದ್ರೆಗಳು ರಂಜಿಸಿದವು. ಊಟವೂ ಮುಗಿಯಿತು.

ಈ ಹೊತ್ತಿಗೆ ಆಚಾರ್‍ಯರು ಮನೆ ಮಂದಿಯ ಯೋಗಕ್ಷೇಮವನ್ನೆಲ್ಲಾ ವಿಚಾರಿಸಿದ್ದರು. ಹಿರಿಯ ಹುಡುಗಿ ಬಾಣಂತಿತನಕ್ಕೆ ಬಂದಿದ್ದಾಳೆ. ಎರಡನೆಯ ಹುಡುಗಿ ಮೊನ್ನೆ ಅತ್ತೆಮನೆಗೆ ಹೋಗಿದ್ದಾಳೆ. ಮೂರನೆಯ ಹುಡುಗಿ ಅತ್ತೆಯ ಮನೆಯಿಂದ ನಾಳೆ ನಾಡಿದ್ದರಲ್ಲಿ ಬರಬಹುದು. ಮೂರ್ಛೆ ರೋಗ ಬರುತ್ತಿದ್ದ ಹುಡುಗನಿಗೆ ಹಾಗೇ ಇದೆ. ಹೆಚ್ಚಿಲ್ಲ, ಕಮ್ಮಿಯೂ ಇಲ್ಲ. ಆಚಾರ್‍ಯರು ಬಿಡಾರ ಮಾಡಿದ ಒಂದೆರಡು ಗಂಟೆಯಲ್ಲಿಯೇ ಎಲ್ಲರಿಗೂ ಅಚ್ಚುಮೆಚ್ಚಾದರು.

ದೇಸಾಯಿಯವರು ಮಧ್ಯಾಹ್ನದ ಚಹಾ ಮುಗಿಸಿ ಹಜಾರಕ್ಕೆ ಬಂದರು. ಮಾಧವಾಚಾರಿ ಅಗಲ ಒಂದು ಜಂಪು ಹೊಡೆದು ಅಲ್ಲಿಯೇ ಇದ್ದ ಒರಗು ದಿಂಬಿಗೆ ಆತುಕೊಂಡು ಕುಳಿತಿದ್ದ. ದೇಸಾಯಿಯವರೇ ಕೇಳಿದರು, ದೇವಸ್ಥಾನ ಕಟ್ಟುವುದೆಲ್ಲಿ ? ಅದಕ್ಕೆ ಪೂಜೆ ಪುನಸ್ಕಾರಗಳ ಏರ್ಪಾಟೇನು ?

"ನಮ್ಮ ಮನೆ ಹಿತ್ತಲು ಕಡೆಗೇ ಒಂದು ಉದ್ಭವ ಮೂರ್ತಿ ಸಿಕ್ಕಿದೆ. ಅಲ್ಲೇ ದೇವಸ್ಥಾನ ಕಟ್ಟಬೇಕೆಂದು ನಮ್ಮ ಹಿರಿಯರ ಸಂಕಲ್ಪವಾಗಿತ್ತು. ಅವರ ಸಂಕಲ್ಪ ಈಡೇರುವುದರೊಳಗೆ ಅವರು ಕಾಲವಾದರು. ಆ ಭಾರ ನನ್ನ ಮೇಲೆ ಬಿತ್ತು. ನಾನೇ ಪೂಜೆ ಪುನಸ್ಕಾರಗಳನ್ನು ಮಾಡುತ್ತೇನೆ. ಮಗನೂ ಕೈ ನೆರವಿಗೆ ಬಂದಿದ್ದಾನೆ. ನಾನು ಊರಿನಲ್ಲಿ ಇಲ್ಲದಿದ್ದಾಗ ಅವನು ನೋಡಿ ಕೊಳ್ಳುತ್ತಾನೆ ಮತ್ತು ಆ ದೇವರಿಗಾಗಿ ಒಂದು ಹತ್ತು ಎಕರೆ ಜಮೀನನ್ನು ಮಾಡುವ ಆಲೋಚನೆಯಿದೆ. ಎಲ್ಲವೂ ಆತನ ಇಚ್ಛೆ''

ದೇಸಾಯಿಯವರು ಅಡಿಕೆ ಎಲೆ ತಟ್ಟೆಯನ್ನು ತರಿಸಿದರು ಅದರಲ್ಲಿ ಐದು ರೂಪಾಯಿನ ಐದು ನೋಟುಗಳನ್ನು ಇಟ್ಟು ಆಚಾರ್ಯರಿಗೆ ದೀರ್ಘ ದಂಡ ನಮಸ್ಕಾರ ಹಾಕಿದರು. ಮಾಧವಾಚಾರಿ ಬಾಯಲ್ಲಿ ಏನೋ ಪಿಟಪಿಟಿ ಅನ್ನುತ್ತಿದ್ದ. ತನ್ನ ರೈಲು, ಮೋಟಾರ್ ಚಾರ್ಜುಗಳು ಗಿಟ್ಟಿದವೆಂದು ಮನಸ್ಸಿನಲ್ಲಿಯೇ ಸಂತೋಷಪಟ್ಟುಕೊಳುತ್ತಿದ್ದ.

ನಮ್ಮ ದೇಶದಲ್ಲಿ ಹಳ್ಳಿ ಹಳ್ಳಿಗೂ ದೇವಾಲಯಗಳಿವೆ. ಅವುಗಳಲ್ಲಿ ಅನೇಕವಕ್ಕೆ ಪೂಜಾದಿಗಳಿಲ್ಲದೆ ಎಷ್ಟೋವರ್ಷಗಳಾಗಿದ್ದು ಕತ್ತೆ, ನಾಯಿಗಳ, ಜೂಜುಕೋರರ, ವ್ಯಭಿಚಾರಿಗಳ ಆವಾಸಸ್ಥಾನವಾಗಿರುತ್ತದೆ. ಅನೇಕ ಗುಡಿ ಗಳು ಅರ್ಧ ಬಿದ್ದಿರುತ್ತವೆ, ಕೆಲವು ನೆಲಸಮವಾಗಿರುತ್ತವೆ. ಇವನ್ನು ಜೀರ್ಣೋದ್ಧಾರ ಮಾಡುವ ಪ್ರಯತ್ನಗಳೇ ಕಮ್ಮಿ. ಆದರೆ ಹೊಸ ದೇವಾಲಯ ಗಳು ದಿನವೂ ಹುಟ್ಟಿಕೊಳ್ಳುತ್ತಿರುತ್ತವೆ. ಸರ್ಕಾರದವರು ಯಾವ ಯಾವ ಪದಾರ್ಥಗಳ ಮೇಲೋ ಕಂಟ್ರೋಲ್ ಹಾಕಿದ್ದಾರೆ. ಹಳೆಯ ದೇವಾಲಯ ಗಳನ್ನು ಜೀರ್ಣೋದ್ಧಾರ ಮಾಡಬೇಕೆಂದೂ, ಹೊಸ ದೇವಾಲಯಗಳನ್ನು ಕಟ್ಟಕೂಡದೆಂದೂ, ಏಕೆ ಕಂಟ್ರೋಲ್ ಹಾಕಬಾರದು ?

ಆಚಾರ್ಯರಿಗೆ ಬೇಕಾದ ವಿಚಾರವನ್ನು ದೇಸಾಯಿಯವರೇ ಎತ್ತಿದರು.

"ಕೊನೆಯ ಹುಡುಗಿ ಮದುವೆಗೆ ಬಂದಿದ್ದಾಳೆ. ಎಲ್ಲೆಲ್ಲೋ ವರ ಹುಡುಕಿದೆವು. ಸರಿಯಾದ ವರ ಸಿಕ್ಕಿಲ್ಲ. ಸರಿಯಾದ ಅಂತ ಹೇಳಬಹುದಾದ ವರಗಳು ಮಿತಿಮೀರಿ ಕೇಳುತ್ತವೆ, ಏನು ಮಾಡೋದು ?"

"ರಾಯರೇ, ನೀವಾಗಿ ಹೇಳಿದ್ದರಿಂದ ನನಗೂ ನೆನಪಾಯಿತು. ನಾನೇನೋ ಪ್ರಯತ್ನ ಮಾಡುತ್ತೇನೆ. ಆದರೆ ಎಲ್ಲಾ ಆತನ ಚಿತ್ತ.

ನಮ್ಮೂರಿನಲ್ಲಿಯೇ ಒಂದು ಒಳ್ಳೆಯ ವರ ಇದೆ. ಈ ವಿಚಾರ ಹೇಳಲು ನನಗೆ ಸ್ವಲ್ಪ ನಾಲಗೆ ಹಿಡಿಯುತ್ತದೆ..........."

"ಅಡ್ಡಿ ಇಲ್ಲ ಹೇಳಿರಿ ಆಚಾರ್ರೇ, ನಮಗೆ ಒಪ್ಪಿಗೆಯಾದರೆ ಮಾಡಿಕೊಳ್ಳುತ್ತೇವೆ, ಇಲ್ಲದಿದ್ದರೆ ಇಲ್ಲ."

"ಇಷ್ಟು ಧೈರ್ಯ ಕೊಟ್ಟರೆ ಹೇಳುತ್ತೇನೆ. ಎಷ್ಟೇ ಆಗಲಿ ದೊಡ್ಡವರ ಸಹವಾಸ. ನಮ್ಮಂಥವರು ಅಳತೆಯಲ್ಲಿರುವುದು ಒಳ್ಳೆಯದು. ಏನೂ ಇಲ್ಲ, ನನಗೆ ಬೇಕಾದವರೂ, ದೂರದ ಅನುಬಂಧಿಗಳೂ ಆದ ಒಬ್ಬ ದೊಡ್ಡ ಮನುಷ್ಯರಿದ್ದಾರೆ. ಅವರ ಹೆಸರು ವೆಂಕೋಬಾಚಾರ್ರು, ಅಂತ. ಹೊಲ, ಮನೆ, ಎಲ್ಲಾ ಇದೆ. ಹತ್ತಾರು ಸಹಸ್ರ ಲೇವಾದೇವಿ ಕೊಟ್ಟಿದ್ದಾರೆ. ದಿವಾಭೀತ ಮನುಷ್ಯ. ಅವರಿಗೆ ಒಬ್ಬನೇ ಮಗ ಇದ್ದಾನೆ. ಈಗ್ಗೆ ಮೂರು ವರ್ಷಗಳ ಹಿಂದೆ ಆ ಹುಡುಗನಿಗೆ ಮದುವೆಯಾಯಿತು. ಆದರೆ......"

"ಹುಡುಗಿ ಕಾಲವಾದಳೇನು ?"

"ಇಲ್ಲ, ಹುಡುಗಿ ಮದುವೆ ಸಮಯದಲ್ಲಿ ಚೆನ್ನಾಗಿದ್ದಳು. ಆಮೇಲೆ ಅವಳಿಗೆ ಮಲರೋಗ ಬರಲಾರಂಭಿಸಿತು. ಗತ್ಯಂತರವಿಲ್ಲದೆ ವೆಂಕೋಬಾಚಾರ್ಯರು ಆ ಹುಡುಗಿಯನ್ನು ಬಿಟ್ಟುಬಿಡಬೇಕಾಯಿತು ಆ ಹುಡುಗಿಯ ಕಾಯಿಲೆ ಗುಣ ಮಾಡಲು ಸ್ವತಃ ಅವರೇ ನೂರಾರು ರೂಪಾಯಿಗಳನ್ನು ವೆಚ್ಚ ಮಾಡಿದರು. ಆದರೆ ಅವರವರು ಮಾಡಿದ ಕರ್ಮವನ್ನು ಅವರು ಉಪಭೋಗಿಸಲೇಬೇಕು. ಹುಡುಗಿಗಾಗಿ ಸೇವೆ ಸೂತ್ರಗಳನ್ನು ನಡೆಸಿದರು. ಯಂತ್ರ ತಂತ್ರಗಳನ್ನು ಮಾಡಿಸಿದರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಹುಡುಗಿಗೆ ಕಾಯಿಲೆ ದಿನದಿನಕ್ಕೆ ಹೆಚ್ಚಿದ್ದಲ್ಲದೆ, ಅದಕ್ಕೆ ಬುದ್ಧಿಭ್ರಮಣೆಯೂ ಆಗಿದೆ. ಒಂದು ದಿನ ತನ್ನ ತವರು ಮನೆಯಿಂದ ಕಾಲುನಡಿಗೆಯಲ್ಲಿ ಹೊನ್ನಾಳಿಯಲ್ಲಿರುವ ನಮ್ಮ ಮನೆಗೆ ಬಂದಿತ್ತು. ಹುಚ್ಚು ಹುಚ್ಚಾಗಿ ಏನೇನೋ ಹರಟಿತು. ಕಡೆಗೆ ನಾನೇ ಅವಳನ್ನು ಬಸ್ಸಿನಲ್ಲಿ ಕೂಡಿಸಿ ಅವಳ ತಂದೆಯ ಮನೆಗೆ ಒಯ್ದು ಬಿಟ್ಟು ಬಂದೆ...."

"ಆಮೇಲೆ !"

"ಆಮೇಲೆ ಏನು, ಹುಡುಗ ಬಹಳ ಒಳ್ಳೆಯವನು, ಬುದ್ಧಿಶಾಲಿ. ತನ್ನ ಹಣೆ ಬರಹ ಹಾಗಿದ್ದರಿಂದ ತನಗೆ ಅಂಥಾ ಕನ್ಯೆ ಸಿಕ್ಕಿತೆಂದೂ, ಬೇರೆ ಮದುವೆ

ಮಾಡಿಕೊಳ್ಳುವುದಿಲ್ಲವೆಂದೂ ಹೇಳಿದ. ಒಬ್ಬನೇ ಮಗ. ತಂದೆಗೆ ಹೇಗಾಗಿರಬೇಕು ರಾಯರೇ? ಮಗನಿಗೆ ಹೇಳಿದ, ಹೇಳಿಸಿದ. ನಾನೂ ಸಹ ಆ ಹುಡುಗನಿಗೆ ಬುದ್ಧಿ ಹೇಳಿದೆ. ಬೇರೆ ಯಾವುದಾದರೂ ಒಂದು ಸಲಕ್ಷಣ ಕನ್ಯೆಯನ್ನು ಮದುವೆಯಾಗು ಅಂದೆ. ಹಾಗೂ ಹೀಗೂ ಶ್ರಮಪಟ್ಟು ಹುಡುಗನನ್ನ ಒಪ್ಪಿಸಿದೆವು ಅನ್ನಿ."

"ಹುಡುಗ ಏನು ಮಾಡುತ್ತಿದ್ದಾನೆ?"

"ಅವನೇನೂ ಮಾಡಬೇಕಾದ್ದಿಲ್ಲ. ಮನೆಯಲ್ಲಿ ಲಕ್ಷ್ಮಿ ಕಾಲು ಮುರಿದುಕೊಂಡು ಬಿದ್ದಿದ್ದಾಳೆ. ಆದರೂ ಹುಡುಗನಿಗೆ ಏನಾದರೂ ಕೆಲಸ ಮಾಡಬೇಕೆಂಬ ಚಪಲ. ಇದ್ದ ಊರಿನಲ್ಲಿಯೇ ಮೇಷ್ಟರ ಕೆಲಸ ಮಾಡಿಕೊಂಡಿದ್ದಾನೆ. ಮೆಟ್ರಿಕ್‌ವರೆಗೆ ಓದಿದ್ದಾನೆ. ಆದರೆ ಈಗಿನ ಕಾಲದ ಹುಡುಗರ ಹಾಗೆ ಮುಂಜುಟ್ಟು, ಸಿಗರೇಟಿಗೆ ಆಹುತಿಯಾಗಿಲ್ಲ. ಬಹಳ ಆಚಾರಶೀಲ. ಅವನು ದೇವರ ಪೂಜೆಗೆ ಕೂತರೆ ಅದೇ ಒಂದು ಚಂದ. ಸಾಕ್ಷಾತ್ ದೇವರೇ ಎದ್ದು ಬರುತ್ತಾನೋ ಅನ್ನುವ ಹಾಗಿರುತ್ತದೆ ಅವನ ಪೂಜೆ. ಅವನ ತಾಯಿಯೂ ಸಹ ಸತ್ಕುಲ ಪ್ರಸೂತರು. ಇರುವ ಒಬ್ಬ ಮಗನ ಅದೃಷ್ಟ ಹೀಗಾದುದನ್ನು ನೋಡಿ ಆಕೆ ಸೊರಗಿ ಕಡ್ಡಿಯಾಗಿಬಿಟ್ಟಿದ್ದಾಳೆ. ಮುದ್ದು ಸೊಸೆ ಮನೆಗೆ ಬಂದು, ಮನೆಯನ್ನು ಎಂದಿಗೆ ಬೆಳಗಿಸಿಯಾಳು, ಎಂದು ಹಂಬಲಿಸುತ್ತ ಕೂತಿದ್ದಾಳೆ. ಆದರೆ ಯೋಗ ಕೂಡಿ ಬರಬೇಕಲ್ಲ ರಾಯರೆ, ಮತ್ಯಾವ ಕನ್ಯಾಮಣಿ ಅವನ ಕೊರಳಿಗೆ ಮಾಲೆ ಹಾಕಲು ಕಾದಿದ್ದಾಳೆಯೋ, ಯಾರಿಗೆ ಗೊತ್ತು?"

"ಆಚಾರ್ರೇ ನೀವು ಧೈರ್ಯ ಕೊಟ್ಟರೆ ಆ ಹುಡುಗನಿಗೆ ನಮ್ಮ ಗೋದಾವರಿಬಾಯನ್ನು ಕೊಡಲು ಯಾವ ಅಡ್ಡಿಯೂ ಇಲ್ಲ. ನೀವು ನಮ್ಮವರೇ ಆಗಿದ್ದೀರಿ. ನಮಗೆ ಅಹಿತವನ್ನೇನೂ ಬಯಸುವವರಲ್ಲ. ಆದರೂ ಮನೆಯವರೊಂದಿಗೆ ಈ ವಿಚಾರ ಪ್ರಸ್ತಾಪ ಮಾಡುತ್ತೇನೆ. ನಾಳೆ ಹೇಗೂ ಮಂಗಳವಾರ, ನೀವು ನಾಡಿದ್ದು ಬೆಳಗ್ಗೆ ಹೊರಡಬಹುದು. ಇವೊತ್ತೇ ಹೋಗುವುದಾಗಿ ನೀವು ಇವಳ ಹತ್ತಿರ ಹೇಳಿದ್ದರಂತೆ. ಅಂಥ ಓಡಿಹೋಗುವದಾವರೂ ಏನಿದೆ? ನೀವೇನು ಸರ್ಕಾರಿ ನೌಕರರಲ್ಲ. ನಿಮಗೆ ಯಾವ ರಜರಪ್ಪುಗಳು ಬೇಕಿಲ್ಲ."

“ರಾಯರೆ, ನನ್ನ ಕೈಲಾದ ಪ್ರಯತ್ನ ಮಾಡುತ್ತೇನೆ. ನನ್ನ ವಿಷಯ ಹೆಚ್ಚಿಗೆ ಹೇಳಿಕೊಳ್ಳುವುದಿಲ್ಲ. ನನ್ನ ಮಾತನ್ನು ವೆಂಕೋಬಾಚಾರ್ಯರು ತೆಗೆದುಹಾಕುವುದಿಲ್ಲ. ಒಟ್ಟಿನಲ್ಲಿ ನಾನು ಬಡವ. ನನ್ನನ್ನು ಮರೆಯಬೇಡಿ.”

“ಮಾಧವಾಚಾರ್ರೇ ನೀವೇನೂ ಕಾಳಜಿ ಮಾಡಬೇಡಿ. ಕೆಲಸ ಆಗಲಿ. ನಿಮ್ಮ ಋಣ ಇಟ್ಟುಕೊಳ್ಳುವುದಿಲ್ಲ.”

ಮಾಧವಾಚಾರಿ ಮಾರನೇ ದಿನವೇ ಹೊನ್ನಾಳಿಗೆ ಹೊರಟ.

. . . .

ಶ್ರೀನಿವಾಸಾಚಾರಿಗೆ ಮೂರು ದಿನಗಳಿಂದ ಜ್ವರ. ಅಗ್ಗವಾದ, ಮನೆಯಲ್ಲೇ ಸಿಕ್ಕಬಹುದಾದ ಔಷಧಿಗಳನ್ನು ಹಾಕಿದರು ತಾವು ತಯಾರಿಸಿದ ಔಷಧಿ ತಮ್ಮ ಮನೆಯವರಿಗೆ ಹಿಡಿಯುವುದಿಲ್ಲವೆಂದು ರಮಾಬಾಯಿಯವರು ಆಸ್ಪತ್ರೆ ‘ನೀರನ್ನು’ ತಂದು ಹಾಕಿದರು. ನಾಲ್ಕನೆಯದಿನ ಅಸ್ತುವ ಹೊತ್ತಿಗೆ ಅವನಿಗೆ ಎಚ್ಚರ ತಪ್ಪಿತು. ಐದನೆಯ ದಿನ ಬೆಳಗಿನಜಾವ ಅವನು ಇಹಲೋಕ ಯಾತ್ರೆಯನ್ನು ಮುಗಿಯಿಸಿದ ಅವನು ಸಾಯುವುದಕ್ಕೆ ಒಂದು ದಿನ ಇದೆ ಎನ್ನುವಾಗ ಡಾಕ್ಟರು ಬಂದಿದ್ದರು ಅವನು ಬದುಕುವದಿಲ್ಲವೆಂಬ ವಿಷಯ ಅವನನ್ನು ನೋಡುತ್ತಲೆ ಅವರಿಗೆ ತಿಳಿಯಿತು. ಆ ದೇಹದಲ್ಲಿ ಏನೂ ಉಳಿದಿರಲಿಲ್ಲ. ಅದು ಯಾವ ಕಾಯಿಲೆಯೂ ಇಲ್ಲದೆ ಸಾಯಲು ಸಿದ್ಧವಾಗಿತ್ತು. ಶ್ರೀನಿವಾಸಾಚಾರಿಗೆ ಅಂಟಿದ್ದ ಕಾಯಿಲೆ ಒಂದು ಅಂಟು ರೋಗ. ಅದರ ಹೆಸರು ‘ಬಡತನ’ ಎಂದು. ವೈದ್ಯತಜ್ಞರು ಈ ಕಾಯಿಲೆಯನ್ನು ಉದ್ದುದ್ದನೆಯ ಹೆಸರುಗಳಿಂದ ನಮಗರ್ಥವಾಗದ ರೀತಿಯಲ್ಲಿ ತಿಳಿಹೇಳುತ್ತಾರೆ. ಎಲ್ಲ ಕಾಯಿಲೆಗಳಿಗೂ ಔಷಧಿಗಳಿವೆ, ಚಿಕಿತ್ಸೆಗಳಿವೆ. ಪ್ರಾಣ ಉಳಿಯುವ ಭರವಸೆಯನ್ನು ಡಾಕ್ಟರು ಕೊಡುತ್ತಾರೆ. ವಿಜ್ಞಾನ ಅಭಯ-ಹಸ್ತ ನೀಡುತ್ತದೆ. ಆದರೆ ‘ಬಡತನ’ ವ್ಯಾಧಿಗೆ ಸಾವೊಂದೇ ಸರಿಯಾದ ಚಿಕಿತ್ಸೆ. ಬಡತನ ನೀಗುವುದು ಸತ್ತಾಗಲೇ. ಬಡತನಕ್ಕೆ ತುತ್ತಾಗಿರುವ ರೋಗಿಗಳಿಗೆ ಯಾವ ಔಷಧಿಯಿಂದಲೂ ಪ್ರಯೋಜನವಾಗುವುದಿಲ್ಲ.

ಒಂದು ಸಾರಿ ಸಂತೆಯಲ್ಲಿ ಒಬ್ಬನು ತಲೆ ತಿರುಗಿ ಕೆಳಕ್ಕೆ ಬಿದ್ದ. ಜನ ಸಂದಣಿ ಸೇರಿತು. ಅವನನ್ನು ಎತ್ತಿ ಕೂಡಿಸಿದರು. ತಲೆಗೆ ತಣ್ಣೀರು

ತಟ್ಟಿದರು. 'ಗಾಳಿ ಬಿಡಿ, ಗಾಳಿ ಬಿಡಿ, ಹಿಂದಕ್ಕೆ ಸರಿಯಿರಿ' ಎಂದೊಬ್ಬ ಪುಣ್ಯಾತ್ಮ ಕೂಗುತ್ತ, ಜನರನ್ನೆಲ್ಲ ಹಿಂದಕ್ಕೆ ಸರಿಸಿದ. ಈ ಹೊತ್ತಿಗೆ ತಲೆ ತಿರುಗಿ ಕೆಳಕ್ಕೆ ಬಿದ್ದಿದ್ದವನು ಕಣ್ಣು ಬಿಟ್ಟ. "ಒಂದು ವಾರದಿಂದ ಬರೀ ಗಾಳಿ ತಿಂದು ಸಾಕಿದೆ. ನನಗೆ ಇನ್ನೇನಾದರೂ ಕೊಡಿ" ಎಂದು ಕೇಳಿದ. ಹಸಿದ ಹೊಟ್ಟೆಗೆ ನಾವು ಗಾಳಿ ತುಂಬುತ್ತಿರುವುದರಿಂದಲೇ ನಮ್ಮ ದೇಶದ ಸಾವಿನ ಸಂಖ್ಯೆ ಜಗತ್ತಿನ ಎಲ್ಲ ರಾಷ್ಟ್ರಗಳನ್ನೂ ಮೀರಿಸಿದೆ.

ಶ್ರೀನಿವಾಸಾಚಾರಿಯ ಶವಸಂಸ್ಕಾರ ಹೇಗಾಯಿತೆಂಬುದನ್ನು ವಿವರಿಸುವ ಕಾರಣವಿಲ್ಲ. ಊರಿನಲ್ಲೆಲ್ಲ ಪಟ್ಟಿ ಎತ್ತಿದ್ದಾಯಿತು. ಬ್ರಾಹ್ಮಣರೇ ಅಲ್ಲದೆ ಇತರರೂ ಪಟ್ಟಿ ಕೊಟ್ಟರು. ಶ್ರೀನಿವಾಸಾಚಾರಿಯ ವಿಷಯ ಒಂದು ತೆರೆದ ಪುಸ್ತಕದಂತಿತ್ತು, ಆ ಊರಿನವರಿಗೆ. ಜನ ತುಂಬಾ ಮರುಗಿತು. ಆದರೇನು? ಆ ಬಡ ಕುಟುಂಬವನ್ನು ಹಿಡಿಯುವರಾದರೂ ಯಾರು? ಎಲ್ಲರಂತೆ ಶ್ರೀನಿವಾಸಾಚಾರಿಯು ಸ್ಥಿರಾಸ್ತಿ ಚರಾಸ್ತಿಗಳನ್ನು ಬಿಟ್ಟುಹೋಗಿದ್ದನು. ಅವನ ಸಾಲವೆಲ್ಲಾ ಸ್ಥಿರಾಸ್ತಿ. ಅದು ಗಟ್ಟಿಮುಟ್ಟಿಯಾಗಿದ್ದು ಎಂದಿಗೂ ತೀರಿಸಲು ಸಾಧ್ಯವಿರಲಿಲ್ಲ. ಅವನ ವಾರಸುದಾರರು ಸಾಲಗಾರರಿಗೆ "ಚಿರಋಣಿ" ಗಳಾಗಿಯೇ ಉಳಿಯಬೇಕಾಗಿತ್ತು. ಇನ್ನು ಚರಾಸ್ತಿಯೆಂದರೆ, ಮನೆ ತುಂಬ ಹಾವಿನಂತೆ ಹರಿದಾಡುವ ಮಕ್ಕಳು!

ಶ್ರೀನಿವಾಸಾಚಾರಿಯ ಮೂರು ಜನ ತಮ್ಮಂದಿರಿಗೂ ಕಾಗದಗಳು ಹೋದವು. ಅವರೆಲ್ಲ ಐದು–ಆರನೆಯ ದಿನಗಳ ಹೊತ್ತಿಗೆ ಬಂದರು. ಸತ್ತವನಿಗೆ ಆಗಬೇಕಾದ ಕರ್ಮಗಳೆಲ್ಲಾ ಭವ್ಯವಾಗಿ ಸಾಗಿದ್ದವು. ಆದರೆ ಪ್ರಾಣ ಇರುವ ಶವಗಳನ್ನು ಏನು ಮಾಡಬೇಕೆಂದು ಅವರು ಬಹಳವಾಗಿ ಆಲೋಚಿಸಿದರು. ಮನೇ ತುಂಬ ಸಣ್ಣ ಸಣ್ಣ ಮಕ್ಕಳು. ತಿನ್ನುವ ಜನವೇ ವಿನಾ ದುಡಿಯುವರಾರೂ ಇಲ್ಲ. ಈಗಲೀಗ ಒಬ್ಬ ಹುಡುಗ–ರಾಮು–ಲೋಯರ್ ಸೆಕಂಡರಿ ತರಗತಿಯಲ್ಲಿ ಓದುತ್ತಿದ್ದಾನೆ. ಊರಿನವರೆಲ್ಲ ಬಂದು ಶ್ರೀನಿವಾಸಾಚಾರಿಯ ತಮ್ಮಂದಿರನ್ನು ಕಂಡರು. ಆ ಬಡ ಕುಟುಂಬವನ್ನು ಕೈಬಿಡಬಾರದೆಂದೂ ಏನಾದರೂ ಸಹಾಯ ಮಾಡಬೇಕೆಂದೂ ಕೇಳಿಕೊಂಡರು. ಆ ಕುಟುಂಬದ ಹೊರೆಯನ್ನು ಮೂರು ಜನ ತಮ್ಮಂದಿರೂ

ಸಮವಾಗಿ ಹಂಚಿಕೊಳ್ಳಬೇಕೆಂದು ಹೇಳಿದರು. ರಾಮು ಹೇಗಾದರೂ ಮಾಡಿ ಎಸ್. ಎಸ್. ಎಲ್. ಸಿ. ಪರೀಕ್ಷೆಯವರೆಗೆ ಓದಬೇಕೆಂದೂ, ಆಮೇಲೆ ಅವನು ಕೆಲಸಕ್ಕೆ ಸೇರಬೇಕೆಂದು ಅಥವಾ ಶಾನುಭೋಗತನ ಮಾಡಬೇಕೆಂದೂ ತೀರ್ಮಾನವಾಯಿತು. ಅಲ್ಲಿಯವರೆಗೆ ಮೂವರು ತಮ್ಮಂದಿರೂ ತಿಂಗಳಿಗೆ ತಲಾ ಐದು ರೂಪಾಯಿಯಂತೆ ಕಳಿಸಲು ಒಪ್ಪಿದರು. ಶ್ರೀನಿವಾಸಾಚಾರಿಯು ಶಾನುಭೋಗತನವನ್ನು, ಗುಮಾಸ್ತೆ ತರ್ಫಿಯಿಂದ ನೋಡಲು ಅವನ ಜ್ಞಾತಿಯೊಬ್ಬನು, ಪೋಟಿಗೆಯಲ್ಲಿ ಸ್ವಲ್ಪಭಾಗ ಸ್ವಾಮಿತ್ವ ಕೊಡಲೊಪ್ಪಿದನು. ಇದು ವರ್ಷಕ್ಕೆ ಅರವತ್ತು ರೂಪಾಯಿಗಳಷ್ಟಾಯಿತು.

ರಾಧೆಯ ವಿಷಯವನ್ನು ಅವಳ ಚಿಕ್ಕಪ್ಪಂದಿರು ಕೆದಕುವ ಸಾಹಸ ಮಾಡಲಿಲ್ಲ. ಅದು ನಿರುಪಯೋಗವೆಂದು ಅವರಿಗೆ ಚೆನ್ನಾಗಿ ಮುಂದಟ್ಟಾಗಿದ್ದಿತು. ಆಸರೆಯಾಗಿದ್ದ ಮಗ ಹೋದ ಮೇಲೆ, ರಮಾಬಾಯಿಯ ಧೈರ್ಯ ಕುಗ್ಗಿದಂತೆ, ನಾಲಗೆಯೂ ಕುಗ್ಗಿತು. ಹೇಗಾದರೂ ಮಾಡಿ ಈ ಕುಟುಂಬ ತಲೆ ಎತ್ತುವಂತೆ ಮಾಡಲು ಆಕೆ ಪ್ರಯತ್ನಪಟ್ಟಳು. ಸೀತಾಬಾಯಿಯವರು ಹಾಸಿಗೆ ಹಿಡಿದರು. ಮಕ್ಕಳು ಅಭ್ಯುದಯಕ್ಕೆ ಬಂದಿದ್ದನ್ನು ನೋಡಿ ಆಕೆ ಸಂತೋಷಪಡಬೇಕು. ಅದು ಯಾವ ಕಾಲಕ್ಕೋ ?

. . . .

ವೆಂಕೋಬಾಚಾರಿಗೂ, ಮಾಧವಾಚಾರಿಗೂ ಬದ್ಧವೈರ ಉಂಟಾಯಿತು. ಶ್ರೀನಿವಾಸಾಚಾರಿಯನ್ನು ಮುಂದೂಡಿ ಮಾಧವಾಚಾರಿ ಮುಸಲತ್ತು ಮಾಡಿದನೆಂದು ವೆಂಕೋಬಾಚಾರಿಗೆ ಗೊತ್ತಾಯಿತು. ಮಾಧವಾಚಾರಿ ವೆಂಕೋಬಾಚಾರಿಯಿಂದ ಮದುವೆ ಸಂದರ್ಭದಲ್ಲೇ ತನ್ನ ದಳ್ಳಾಳಿಯನ್ನು ವಸೂಲು ಮಾಡಿಕೊಂಡಿದ್ದ. ಆದರೆ ಧಾರೆಯ ದಿನ ಶ್ರೀನಿವಾಸಾಚಾರಿಯ ಹತ್ತಿರ ಹಣವಿಲ್ಲೆಂದೂ ಮುಂದೆ ಯಾವಾಗಲಾದರೂ ಅದನ್ನು ಕೊಡುವನೆಂದೂ ಹೇಳಿದ್ದ. ವೆಂಕೋಬಾಚಾರಿ ಲೆಕ್ಕ ಹಾಕಿದ ಗುಣಾಕಾರವೆಲ್ಲ ತಪ್ಪಿದ್ದರಿಂದ, ಈ ತಪ್ಪಿಗೆ ಮಾಧವಾಚಾರಿಯೇ ಕಾರಣನಾದ್ದರಿಂದ ಅವನ ಮೇಲೆ ವೈರ ಸಾಧಿಸಲಾರಂಭಿಸಿದ. ಈಗ ಒಬ್ಬರನ್ನೊಬ್ಬರು ಬಹಿರಂಗವಾಗಿಯೇ ದೂಷಿಸುತ್ತಾರೆ.

ಒಂದು ದಿನ ವೆಂಕೋಬಾಚಾರಿ ದೇವತಾರ್ಚನೆಗೆ ಕೂತಿದ್ದಾಗ ಮಾಧವಾಚಾರಿ ಅಕಸ್ಮಾತ್ತಾಗಿ ಬಂದ. ವೆಂಕೂಬಾಯಿಯವರು ಅಡಿಗೆ ಮಾಡುತ್ತಿದ್ದರು. ಪ್ರಾಣೇಶ ಸ್ಕೂಲಿಗೆ ಹೋಗಿದ್ದ.

"ವೆಂಕೋಬಾಚಾರ್ರ್ರೆ, ಈ ಹಿಂದೆ ಏನೇನೋ ನಡೆದುಹೋಯಿತು. ಮನುಷ್ಯ ಪ್ರಯತ್ನ ಒಂದಾದರೆ ದೈವ ಪ್ರಯತ್ನ ಒಂದಾಗುತ್ತದೆ. ಶ್ರೀನಿವಾಸಾಚಾರಿ ಅಷ್ಟರವುಟ್ಟಿಗೆ ತವಡು ಹಾರಿದ್ದಾನೆಂದು ನಾನು ಸ್ವಪ್ನ ದಲ್ಲಿಯೂ ಎಣಿಸಿರಲಿಲ್ಲ. ಆದದ್ದಾಯಿತು ಈಗ ಇನ್ನೊಂದು ಹೊಸ ವಿಚಾರ ಪ್ರಸ್ತಾಪಿಸಲು ನಿಮ್ಮ ಹತ್ತಿರ ಬಂದಿದ್ದೇನೆ........"

"ಮಾಧವಾಚಾರ್ರೇ, ಎಲ್ಲಾ ನಮ್ಮ ಗ್ರಹಚಾರ, ನೀವು ನಮ್ಮ ಹಣ ಕಳೆದಿರಿ, ಮಾನ ಕಳೆದಿರಿ. ಇಷ್ಟೂ ಸಾಲದೆಂದು ನಮ್ಮನ್ನು ಕಾಡಲು ಬಂದ ಹಾಗೆ ಕಾಣುತ್ತದೆ. ನನ್ನೊಂದಿಗೆ ಯಾವ ವಿಚಾರವನ್ನೂ ಪ್ರಸ್ತಾಪಿಸ ಬೇಡಿ. ನಿಮ್ಮ ದಾರಿ ನಿಮಗೆ, ನಮ್ಮ ದಾರಿ ನಮಗೆ"

"ನಾನು ಒಂದೆರಡು ಮಾತು ಹೇಳಿ ಹೋಗುತ್ತೇನೆ. ನಿಮಗೆ ಅದು ಹಿಡಿದರೆ ಮುಂದೆ ಮಾತನಾಡಿ, ಇಲ್ಲವಾದರೆ ಬೇಡ. ಹೋದ ಆರಾಧನೆ ಸಮಯಕ್ಕೆ ಬಿದಿರಹಳ್ಳಿ ದೇಸಾಯಿಯವರು ಬಂದಿದ್ದು ನಿಮಗೆ ಜ್ಞಾಪಕ ಇರಬಹುದು. ಅದೇ ಅವರ ಮಗನಿಗೆ ಮೂರ್ಛೆರೋಗ ಬರುತ್ತಿತ್ತಲ್ಲ, ನಿಮಗೆಲ್ಲಾ ಒಂದೊಂದು ರೂಪಾಯಿ ದಕ್ಷಿಣೆ ಕೊಡಿಸಿದ್ದೆನಲ್ಲ. ಈಗ ಒಂದು ವಾರದ ಕೆಳಗೆ ನನ್ನ ಸ್ವಂತ ಕೆಲಸದ ಮೇಲೆ ಆ ಪ್ರಾಂತ್ಯಕ್ಕೆ ಹೋಗಿದ್ದೆ. ಹಾಗೆ ದೇಸಾಯಿಯವರನ್ನು ನೋಡಿಕೊಂಡುಬರಲು ಬಿದಿರಹಳ್ಳಿಗೆ ಹೋಗಿದ್ದೆ. ಅವರೇ ಏನೋ ಮಾತಾಡುತ್ತಿರುವಾಗ ತಮಗೊಂದು ಒಳ್ಳೆಯ ವರ ಬೇಕೆಂದು ಸೂಚಿಸಿದರು. ಅವರ ಮಗಳೇ ಕನ್ಯೆ ಹುಡುಗಿ ಲಕ್ಷಣ ವಾಗಿದ್ದಾಳೆ. ಹದಿನಾಲ್ಕರ ಹೊಸಲು ದಾಟಿಲ್ಲ. ಈಗಾಗಲೇ ಮೂರು ಮದುವೆ ಮಾಡಿ ಸುಸ್ತಾಗಿದ್ದಾರೆ. ಮೊದಲಿನ ವರಮಾನವೂ ಇಲ್ಲ. ಏನೇ ಆದರೂ ಮೆಣಸು ಹುಳಿತರೆ ಜೋಳಕ್ಕೆ ಕಡಿಮೆಯೇ ಅನ್ನುವಂತೆ ಇನ್ನೂ ಜಿಗುಟಿದೆ. ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡುತ್ತಾರೆ. ಎರಡೂ ಖರ್ಚು ಹಾಕಿ ಅವರ ಮನೆಯ ಬಾಗಿಲಲ್ಲಿಯೇ ಧಾರೆಯೆರೆದುಕೊಡುತ್ತಾರೆ. ನಾನು ಪ್ರಾಣೇಶನ ವಿಚಾರ ತಿಳಿಸಿ ಅವರನ್ನು ಒಪ್ಪಿಸಿದ್ದೇನೆ. ಅವನ

ಹೆಂಡತಿಗೆ ಮಲರೋಗ ಬರುತ್ತಿದೆಯಾದ್ದರಿಂದ ಅವಳನ್ನು ಬಿಟ್ಟಿರುವದಾಗಿಯೂ ತಿಳಿಸಿದ್ದೇನೆ. ಅವರು ಕನ್ಯಾ ಕೊಡಲು ಒಪ್ಪಿದ್ದಾರೆ. ಪ್ರಾಣೇಶನ ಕುಂಡಲಿಯನ್ನು ಸಹ ಕೊಟ್ಟಿದ್ದೇನೆ. ನಿಮ್ಮ ಪ್ರತಿನಿಧಿಯಾಗೇ ಇಂತಿಷ್ಟು ಕೆಲಸ ಪೂರೈಸಿದ್ದೇನೆ. ನೀವು, ಪ್ರಾಣೇಶ ಅಲ್ಲಿಗೆ ಹೋಗಿ ಕನ್ಯಾ ನೋಡಿದ ಶಾಸ್ತ್ರ ಮಾಡಿ, ಒಪ್ಪಿಗೆ ಕೊಟ್ಟರಾಯಿತು. ಶುಭಮುಹೂರ್ತ ನೋಡಿ ಮದುವೆ ಹೂಡೆಯಿಸಿಬಿಡೋಣ. ಒಂದು ವಿಚಾರ ಹೇಳಿಬಿಡುತ್ತೇನೆ. ನನಗೆ ಇದರಲ್ಲಿ ಯಾವ ಸ್ವಾರ್ಥವೂ ಇಲ್ಲ. ನಿಮ್ಮಿಂದ ಕೆಲಬು ಕಾಸು ಸಹ ನಾನು ಅಪೇಕ್ಷೆ ಮಾಡುವದಿಲ್ಲ ನಿಮ್ಮ ಕೆಲಸವೆಲ್ಲ ಸಾಂಗೋಪಾಂಗವಾಗಿ ನೆರವೇರಿದ ಮೇಲೆ ನಿಮಗೆ ದೇವರು ಬುದ್ಧಿ ಕೊಟ್ಟಷ್ಟು ಕೊಡಿ, ಇಲ್ಲವಾದರೆ ಬೇಡ. ನನಗೂ ಅನ್ನಿಸುತ್ತಿದೆ, ಏನೋ ನನ್ನಿಂದ ಅಚಾತುರ್ಯ ಜರುಗಿದೆಯೆಂದು. ಅದನ್ನು ಸರಿಪಡಿಸಲು ನಾನು ಕಂಕಣ ತೊಟ್ಟಿದ್ದೇನೆ."

ವೆಂಕೋಬಾಚಾರಿ ಒಂದು ಗಳಿಗೆ ಯಾವ ಮಾತನ್ನೂ ಆಡಲಿಲ್ಲ ಬಿದಿರಹಳ್ಳಿ ದೇಸಾಯಿಯವರನ್ನು ಅವನು ನೋಡಿದ್ದ ಅವರ ವಿಚಾರ ಸಾಕಷ್ಟು ಅವನಿಗೆ ತಿಳಿದಿತ್ತು. ಅವರ ಮಗಳನ್ನು ನೋಡಿದ ಜ್ಞಾಪಕ ಅವನಿಗಿರಲಿಲ್ಲ. ದೇಸಾಯಿಯವರೊಡನೆ ತಾನು ಸಂಬಂಧ ಬೆಳಸಿದರೆ ತನ್ನ ಅಂತಸ್ತು ಒಂದು ಮೆಟ್ಟಿಲ ಹೆಚ್ಚುತ್ತದೆಂದು ಅವನು ಬಯಸಿದ. ಮಾಧವಾಚಾರಿ ಸ್ವಾರ್ಥವಿಲ್ಲದೆ ಈ ಕೆಲಸದಲ್ಲಿ ಕೈಹಾಕಿಲ್ಲವೆಂಬುದು ವೆಂಕೋಬಾಚಾರಿಗೆ ಚೆನ್ನಾಗಿ ಗೊತ್ತು. ದೇಸಾಯಿಯವರಿಂದಲೇ ಏನೋ ಹೊಡೆದಿರಬೇಕೆಂದೂ, ಇಲ್ಲವಾದರೆ ಹೊಡೆಯಲಿದ್ದಾನೆಂದೂ ಅವನು ಊಹಿಸಿದ.

"ನಿನ್ನಿಂದ ಒಂದು ನಾರಿ ಪೆಟ್ಟು ತಿಂದಿದ್ದೇನೆ. ನಿನ್ನ ವಿಚಾರ ನನಗೆ ಸಂಪೂರ್ಣ ಗೊತ್ತಿದೆ. ಇದರಲ್ಲಿ ಇನ್ನು ಏನಾದರೂ ಅಂತರ್ಯ ಇದ್ದರೆ ಹೇಳು"

"ಶ್ರೀಗುರುಗಳ ಆಣೆಯಾಗಿಯೂ ಏನೂ ಅಂತರ್ಯವಿಲ್ಲ. ನನಗೆ ಇದರಲ್ಲಿ ಏನಾದರೂ ಬರುವದಿದ್ದರೆ ದೇಸಾಯಿಯವರಿಂದ ಬರುತ್ತದೆ. ನಿಮಗೆ ಎಲ್ಲಾ ರೀತಿಯಿಂದಲೂ ಅನುಕೂಲವಾದರೆ ನನಗೆ ಏನಾದರೂ ಕೊಡಿರೆಂದು ಕೇಳುತ್ತೇನೆ, ಅಷ್ಟೆ. ನೀವು ಪ್ರಾಣೇಶನ ಜಾತಕ ಕೊಡಿ. ಇವೊತ್ತು ಕಳಿಸುತ್ತೇನೆ. ದೇಸಾಯಿಯವರಿಂದ ಉತ್ತರ ಬಂದಮೇಲೆ ಒಂದು ದಿನ ಬಿದಿರ

ಹಳ್ಳಿಗೆ ಹೋಗಿ ಬಂದು ಬಿಡೋಣ. ಪ್ರಾಣೇಶನ ಕಿವಿಗೂ ಈ ಮಾತು ಹಾಕಿಬಿಡಿ."

ಈ ವೇಳೆಗೆ ವೆಂಕೋಬಾಚಾರ್ಯರು ಪೂಜಾವಿಧಿಯನ್ನು ಅದು ಹೇಗೋ ಮುಗಿಸಿದರು. ಹೊರಕ್ಕೆ ಬಂದು ಉಟ್ಟಿದ್ದ ಮಡಿಯನ್ನು ಬಿಚ್ಚಿಟ್ಟು ಒಗೆದ ಪಂಚೆ ಉಟ್ಟುಕೊಂಡರು. ಈ 'ಮಡಿ'ಯಂಥ ಮೈಲಿಗೆ ಬಟ್ಟೆ ಪ್ರಪಂಚ ದಲ್ಲಿಯೇ ಇಲ್ಲ. ನೀರು ಕಂಡು ಅದೆಷ್ಟು ಯುಗಗಳಾಗಿರುತ್ತದೋ. ಅದು ಹಾಗಿದ್ದರೂ ಅದು ಸದಾ ಮಡಿ. ಅದರ ಕೊಳೆ ವಾಸನೆಯನ್ನು ಸಹಿಸದೆ, ದೇವರು ಅದೆಲ್ಲಿ ಓಡಿಹೋಗಿ ಅವಿತುಕೊಳ್ಳಬೇಕಾಗುತ್ತದೋ ತಿಳಿಯದು.

ಪ್ರಾಣೇಶನ ಜಾತಕದ ನಕಲನ್ನು ತೆಗೆದುಕೊಂಡು ಮಾಧವಾಚಾರಿ, ಪ್ರಸನ್ನಮುಖಿಯಾಗಿ ಹೊರಟ.

ಮಾಧವಾಚಾರಿ ಹೊಗುತ್ತಲೇ ವೆಂಕೂಬಾಯಿಯವರು ಅಪಸ್ವರ ಎತ್ತಿದರು. "ಶ್ರೀನಿವಾಸಾಚಾರ್ರು ಹೋದರು, ಆ ಹುಡುಗಿಯ ಗತಿ ಏನು? ಅದು ಎಷ್ಟೇ ಆಗಲಿ ನನ್ನ ವಸ್ತು. ಮನೆಗೆ ಕರೆದುಕೊಂಡು ಬರೋಣ."

ವೆಂಕೋಬಾಚಾರಿ ಒಂದೇ ಬಾರಿಗೆ ಆರ್ಭಟಿಸಿದ. "ಶ್ರೀನಿವಾಸಾಚಾರಿಯೇ ಏಕೆ, ಅವರ ಮನೆ ಮಂದಿಯೆಲ್ಲಾ ಹಾಳಾಗಲಿ. ಮೊದಲೇಕೆ ಮಾತುಕೊಡ ಬೇಕು, ಆ ಮೇಲೆ ಏಕೆ ವಚನಭ್ರಷ್ಟರಾಗಬೇಕು? ಅವರು ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ಅನುಭವಿಸುತ್ತಿದ್ದಾರೆ. ಇದರಲ್ಲಿ ನೀನು ಬಾಯಿ ಹಾಕ ಬೇಡ. ಪ್ರಾಣೇಶನ ತಲೆ ಕೆಡಿಸಬೇಡ. ಮೊದಲಿಗಿಂತಲೂ ಉತ್ತಮವಾದ ಸಂಬಂಧ ಬಂದಿದೆ. ಅದನ್ನೇನಾದರೂ ನೀನು ತಪ್ಪಿಸಲು ಪ್ರಯತ್ನಪಟ್ಟರೆ, ನನ್ನ ಮನೆಯಲ್ಲಿ ಒಂದು ಗಳಿಗೆ ಸಹ ನಿಲ್ಲಕೂಡದು."

ವೆಂಕೂಬಾಯಿಯವರನ್ನು ಹೆದರಿಸಲು ವೆಂಕೋಬಾಚಾರಿ ಯಾವಾ ಗಲೂ 'ಮನೆ ಬಿಟ್ಟು ಹೋಗು' ಎಂಬ ಅಸ್ತ್ರವನ್ನು ಬಳಸುತ್ತಿದ್ದ. ಆ ಅಪರ ವಯಸ್ಸಿನಲ್ಲಿ ಆ ಮುದುಕಿ ಹೋಗುವುದಾದರೂ ಎಲ್ಲಿಗೆ? ಹಾಗೆ ಹೋಗು ಎಂತ ಗಂಡ ಹೇಳುತ್ತಿರುವುದು ಅರ್ಥರಹಿತ ಶಬ್ದಗಳೆಂದು ಆಕೆಗೆ ಗೊತ್ತಿರ ಲಿಲ್ಲ. ನಿಜವೆಂದೇ ತಿಳಿದು ಅರಳಿ ಎಲೆಯಂತೆ ಗಡಗಡನೆ ನಡುಗುತ್ತಿದ್ದಳು.

ಪ್ರಾಣೇಶ ಸ್ಕೂಲು ಮುಗಿಸಿಕೊಂಡು ಬಂದ. ಮಾಧವಾಚಾರಿ ಹೇಳಿದ ಮಾತುಗಳಿಗೆ ಮಸಾಲೆ ಹಾಕಿ ವೆಂಕೋಬಾಚಾರಿ ತಿಳಿಸಿದ. ಪ್ರಾಣೇಶ ದಡ್ಡನಾಗಿದ್ದರೂ ನ್ಯಾಯಾನ್ಯಾಯಗಳ ಅರಿವು ಅವನಿಗಿತ್ತು. ಈರೀತಿ ತಂದೆ ಮಾಡುತ್ತಿರುವುದೂ ತಪ್ಪೆಂದು ತೋರಿತು. "ಅಪ್ಪಾ, ಅವಳನ್ನೇ ಕರೆದುಕೊಂಡು ಬರೋಣ. ನನ್ನ ಮಾವನೂ ತೀರಿಕೊಂಡರಂತೆ. ಏನೋ ಆದದ್ದಾಯಿತು. ಹಿಂದಿನವನ್ನೆಲ್ಲಾ ಕಟ್ಟಿಕೊಂಡು ಅತ್ತರೆ ಬರುವ ಲಾಭವಾದರೂ ಏನು?"

ವೆಂಕೋಬಾಚಾರಿ ಬಹಳ ಬುದ್ಧಿವಂತ. ಹೆಂಡತಿಗೆ ಪ್ರಯೋಗಿಸಿದ ಅಸ್ತ್ರವನ್ನೇ ಮಗನಿಗೂ ಪ್ರಯೋಗಿಸುತ್ತಿದ್ದ. ಅವನಿಗೂ ಮನೆ ಬಿಟ್ಟು ಹೋಗೆಂದು ಹೇಳುವುದು ಆಚಾರಿಯ ನಿತ್ಯ ಜಪವಾಗಿತ್ತು. ತನ್ನನ್ನು ಮನೆ ಬಿಟ್ಟು ಹೊರಗಟ್ಟಿದರೆ ತನ್ನ ಗತಿ ಏನು? ಎಂಬುದೇ ಪ್ರಾಣೇಶನ ಚಿಂತೆ. ವೆಂಕೋಬಾಚಾರಿಯ ಆಸ್ತಿ ಎಲ್ಲ ಅವನೇ ಸ್ವಂತ ದುಡಿದಿದ್ದು. ಪಿತ್ರಾರ್ಜಿತ ಆಸ್ತಿ ಏನೂ ಇರಲಿಲ್ಲ ಆಚಾರಿ ಸಿಟ್ಟಿನಲ್ಲಿ ಜಮದಗ್ನಿಯನ್ನು ಮೀರಿಸಿದವನು. ಮೇಲಾಗಿ ಸೇಡು ಮತ್ತು ಛಲ ಅವನಲ್ಲಿ ಮನೆ ಮಾಡಿಕೊಂಡಿದ್ದವು. ಆಸ್ತಿಯನ್ನೆಲ್ಲಾ ಮಾರಿ, ತೂರಿದರೆ ತನ್ನ ಗತಿ ಏನು? ತನಗೆ ಬರುತ್ತಿದ್ದುದು ಹದಿನೈದು ರೂಪಾಯಿ ಸಂಬಳ. ಅದು ಯಾವ ಮೂಲೆಗೆ?

ಪ್ರಾಣೇಶನ ಎದಿರು ವೆಂಕೋಬಾಚಾರಿ ಒಂದು ದೊಡ್ಡ ನಾಟಕವನ್ನೇ ಕಟ್ಟಿದ. ವೆಂಕೂಬಾಯಿಯವರು ಮತ್ತು ಪ್ರಾಣೇಶ ಮಾತಾಡಲು ಅವಕಾಶವನ್ನೇ ಕೊಡಲಿಲ್ಲ. ಹೆದರಿಕೆಯಿಂದ ಅವರು ಸುಮ್ಮನಿದ್ದುದನ್ನು ಸಮ್ಮತಿಯೆಂದು ಭಾವಿಸಿದ.

* * * *

ದೇಸಾಯಿಯವರ ಕೈಗೆ ಪ್ರಾಣೇಶನ ಜಾತಕ ಬಂದ ಕೂಡಲೇ ಅದನ್ನು ತಮ್ಮ ಮನೆ ಜೋಯಿಸರಿಗೆ ತೋರಿಸಿದರು. ಅವರು ಜಾತಕಗಳನ್ನು ತೂಗಿ ಸರಿಯಾಗಿದೆಯೆಂದು ಹೇಳಿದರು. ಮಾಧವಾಚಾರಿಗೆ ದೇಸಾಯಿಯವರು ಪತ್ರ ಬರೆದು ವರ ಮತ್ತು ಅವನ ತಂದೆಯನ್ನು ಕರೆತರಲು ತಿಳಿಸಿದರು.

ದೇಸಾಯಿಯವರ ಪತ್ರವನ್ನು ಎದಿರು ನೋಡುತ್ತಿದ್ದ ಮಾಧವಾಚಾರಿ ಮತ್ತು ವೆಂಕೋಬಾಚಾರಿಯವರು ಪತ್ರ ಬಂದಕೂಡಲೇ ಪ್ರಯಾಣ ಸನ್ನದ

ರಾದರು. ಇಡೀ ಊರಿನಲ್ಲಿ ನಾವು ಮೂವರು ಯಾವ ಕೆಲಸಕ್ಕೆ ಹೊರ ಟಿರುವ ವಿಚಾರವನ್ನು ಬಾಯಿ ಬಿಟ್ಟಿರಲಿಲ್ಲ. ಆದರೂ ಈ ಮೂವರೂ ಬಸ್ ಸ್ಟಾಂಡಿಗೆ ಬಂದಾಗ ಜನ ಊಹಿಸಿದರು. ಇಂಥ ಕಾರ್ಯಕ್ಕೆ ಅವರು ಹೊರಟಿದ್ದಾರೆಂದು ಜನ ಊಹಿಸಿದರೂ, ಇಂಥಲ್ಲಿಗೆ ಹೊರಟಿದ್ದಾರೆಂದು ಅವರಿಗೆ ಗೊತ್ತಾಗಲಿಲ್ಲ. ಪ್ರಾಣೇಶನಿಂದ ಹೇಗಾದರೂ ಬಾಯಿ ಬಿಡಿಸ ಬೇಕೆಂದು ಅವರು ಪ್ರಯತ್ನಿಸಿದರು. ಅವರ ಸುಳಿವನ್ನು ತಿಳಿದ ವೆಂಕೋಬಾ ಚಾರಿ ಮತ್ತು ಮಾಧವಾಚಾರಿ ಪ್ರಾಣೇಶನನ್ನು ತಮ್ಮ ಮಧ್ಯದಲ್ಲಿಯೇ ನಿಲ್ಲಿಸಿಕೊಂಡು ಅವನ ಬಳಿಗೆ ಯಾರೂ ಬರದಂತೆ ಪಹರೆ ಕಾಯುತ್ತಿದ್ದರು. ಅವರು ಬಸ್‌ನಲ್ಲಿ ಕೂತಾಗಲೂ ಅಷ್ಟೆ. ಪ್ರಾಣೇಶನನ್ನು ಮಧ್ಯೆ ಕೂರಿಸಿ ಕೊಂಡಿದ್ದರು.

*　　　*　　　*　　　*

ಬಿದಿರಹಳ್ಳಿ ಅತಿ ರಮ್ಯವಾದ ಊರು. ಗೊಡ್ಡುಹಳ್ಳಿ ಎಂದರೆ ತಪ್ಪಾ ಗಲಾರದು. ಊರಿನ ಬಲ ಪಾರ್ಶ್ವದಲ್ಲಿ ತುಂಗಭದ್ರಾನದಿಯು ವಂಕಿಯಂತೆ ಡೊಂಕಾಗಿ ಹರಿಯುತ್ತಿದೆ. ಊರಿನ ಜನರಲ್ಲಿ ಒಕ್ಕಲು ಮಕ್ಕಳೇ ಹೆಚ್ಚು. ದೇಸಾಯಿಯುವರ ಮನೆಯೇ ಅತಿ ದೊಡ್ಡದು. ಮನೆಗೆ ಅರ್ಧ ಭಾಗ ಕರಿಯ ಹೆಂಚೂ, ಅರ್ಧ ಭಾಗ ಕೆಂಪು ಹೆಂಚೂ ಹೊದಿಸಿದೆ. ಕರಿಯ ಹೆಂಚಿನ ಭಾಗ ಪೂರ್ವಿಕರು ಕಟ್ಟಿಸಿದ್ದು. ಅದರಲ್ಲಿ ಬಿದ್ದ ಭಾಗವನ್ನು ರಿಪೇರಿ ಮಾಡಿ ಅದಕ್ಕೆ ಕೆಂಪು ಹೆಂಚು ಹೊದಿಸಲಾಗಿತ್ತು. ದೇಸಾಯಿಯವರನ್ನು ಅಲ್ಲಿನ ಜನಗಳು 'ಧಣೇರು' ಎಂದು ಕರೆಯುತ್ತಾರೆ. ಊರಿನ ಸರ್ಕಾರದ ಉನ್ನತಾಧಿಕಾರಿಗಳು ಅವರೇ, ಸಾಹುಕಾರರೂ ಅವರೇ. ಊರಿನ ಜನತೆಯ ಆರ್ಥಿಕ ವ್ಯವಹಾರಗಳು ನಡೆಯುವುದೆಲ್ಲಾ ಇವರ ಮೂಲಕವೆ. ದೇಸಾಯಿ ಯವರು ತೀರ ಒಳ್ಳೆಯವರಾದ್ದರಿಂದ ಅದರ ಉಪಯೋಗ ಅಥವಾ ದುರುಪ ಯೋಗವನ್ನು ಜನರು ತೆಗೆದುಕೊಳ್ಳದೆ ಬಿಡಲಿಲ್ಲ. ಅವರೀಗ ಹೀನಸ್ಥಿತಿಗಿಳಿ ದಿದ್ದು ಸಹ ಅವರು ಒಳ್ಳೆಯವರಾಗಿದ್ದರಿಂದಲೇ ಎಂದು ಹೇಳಿದರೆ ಉತ್ಪ್ರೇಕ್ಷೆಯ ಮಾತಾಗಲಾರದು.

ದೇಸಾಯಿಯವರಿಗೆ ದುಡಿಯುವ ಮಕ್ಕಳಾರೂ ಕೈಗೆ ಬಂದಿಲ್ಲ. ಮೊದಲಿನ ಮೂವರು ಸಾಲಾಗಿ ಹೆಣ್ಣು ಮಕ್ಕಳು. ನಾಲ್ಕನೆಯವನು

ಹದಿಮೂರು ವರ್ಷದವನು ಮಾತ್ರ ಬಿದಿರಹಳ್ಳಿಯಲ್ಲಿ ಇಂಗ್ಲೀಷ್ ಶಾಲೆ ಇಲ್ಲದಿದ್ದುದರಿಂದ ಅವನನ್ನು ಧಾರ್ವಾಡದಲ್ಲಿ, ನಂಟರೊಬ್ಬರ ಮನೆಯಲ್ಲಿ ಬಿಡಲಾಗಿದೆ ಐದನೆಯ ಹುಡುಗನಿಗೆ ಮೂರ್ಛೆ ರೋಗ. ಅದು ಮುಂದೆ ಯಾವ ವಸ್ತುವೂ ಆಗುವದಿಲ್ಲವೆಂಬ ದುರ್ಲಕ್ಷಣಗಳು ಕಾಣಬಂದಿವೆ.

ಗೋದಾವರಿ ಚೆಲುವೆ. ಸುಖದಿಂದ ಬೆಳೆದವಳು. ಮೇಲಾಗಿ ಅಕ್ಕರೆಯಿಂದ ಸಾಕಿದ ಕಡೆ ಹುಟ್ಟಿನ ಕಟ್ಟಾಣಿ. ದುಂಡು ಮುಖ, ಗುಂಗುರು ಕೂದಲು. ಯಾವಾಗಲೂ ಮುಂಗುರುಳುಗಳು ಎಳೆಯ ನಾಗರಹಾವಿ ನಂತೆ ಹಣೆಯಮೇಲೆ ಮೊಂಡುತನದಿಂದ ಜೋತು ಬಿದ್ದಿರುತ್ತವೆ ಅವನ್ನು ಎಡಗೈಯಿಂದ ಆಗಾಗ್ಗೆ ಹಿಂದೆಸರಿಸುತ್ತಿರುವುದೇ ಒಂದು ಕೆಲಸ ಗೋದಾವರಿಗೆ. ಹುಡುಗಿ ಕೊಂಚ ಗಿಡ್ಡು ಹುಟ್ಟು. ಇದರಿಂದಾಗಿ ಆಕೆ ಕೊಂಚ ಸ್ಥೂಲಕಾಯದವಳಂತೆ ಕಾಣುವುದು ಸಹಜವಾಗಿದೆ. ಅಚ್ಚಕಾಗಿನ ತೋಪಿನ ಮುಸುಗು ಸೀರೆ ಉಡಬೇಕೆಂದರೆ ಅವಳಿಗೆ ಆಸೆ ಅಚ್ಚ ಬಿಳಿಯ ದೇಹಕ್ಕೆ ಅಚ್ಚು ಕಪ್ಪು ಸೀರೆಯು ಬಹು ಮುದ್ದಾಗಿ ಒಪ್ಪುತ್ತಿತ್ತು. ಅಗಲವಾದ ಹಣೆಗೆ ಕಂಡೂಕಾಣದಂಥ ಕುಂಕುಮ ಬಲಗೆನ್ನೆಯಮೇಲೊಂದು ಕರಿಯ ಗೆಳತಿ (ಮಚ್ಚೆ) ಯು ದೃಷ್ಟಿ ಬಟ್ಟಿನಂತಿದ್ದು ಆಕೆಯ ಸೌಂದರ್ಯವನ್ನು ವೃದ್ಧಿಗೊಳಿಸಿದ್ದವು. ಅಗಲವಾದ ಕಣ್ಣುಗಳು ಕೈಗೆ ನಿಲುಕದ ಯಾವದೋ ಕಾಣದ ವಸ್ತುವೊಂದನ್ನು ಅರಸುವಂತೆ ಭಾಸವಾಗುತ್ತಿತ್ತು.

ಕನ್ಯಾ ವಿಚಾರದಲ್ಲಿ ವೆಂಕೋಬಾಚಾರ್ಯರು ಯಾವ ಆಕ್ಷೇಪವನ್ನೂ ತೆಗೆಯುವ ಸಾಹಸಕ್ಕೆ ಬೀಳಲು ಸಿದ್ಧರಾಗಿರಲಿಲ್ಲ. ಅವರಿಗೆ ಬೇಕಾಗಿದ್ದು ನಗದು ಎರಡು ಸಾವಿರ ರೂಪಾಯಿ ಉಳಿದ ವಿಚಾರ ಸ್ವಲ್ಪ ಹೆಚ್ಚು ಕಡಿಮೆ ಆದರೆ ನಡೆದೀತು. ಹೆಣ್ಣನ್ನು ತೋರಿಸುವ ಸಂಭ್ರಮ ನಡೆಯಿತು. ಗೋದವ್ವನ ಗಂಡನನ್ನು ನೋಡಲು ಅರ್ಧಕ್ಕರ್ಧ ಊರೇ—ಇದರಲ್ಲಿ ಹೆಚ್ಚಿನ ಸಂಖ್ಯೆಯವರು ಹೆಂಗಸರು—ಬಂದಿದ್ದಿತು. ಪ್ರಾಣೇಶನನ್ನು ನೋಡಿ ಅವರು ಬೆರಳು ಕಚ್ಚಿದ್ದರು. "ಹುಡುಗ ಪಾಡಾಗಿದ್ದಾನೆ. ಗೋದವ್ವನ ಪುಣ್ಯ" ಎಂದು ಎಲ್ಲರೂ ಹೇಳಿದರು. ಆದರೆ ಹುಡುಗನ ತಲೆಯಲ್ಲಿ ಆ ಬೂದು ಬಣ್ಣದ ವಸ್ತು ಮೆದುಳೆಂಬುದು ಸಾಕಷ್ಟು ಇಲ್ಲನೆನ್ನುವುದು ಅವರಿಗೆ ಹೇಗೆ

ಗೊತ್ತು. ಪ್ರಾಣೇಶನಿಗೆ ಯಾವ ಮಾತನ್ನೂ ಆಡದೆ "ಗಂಭೀರ" ವಾಗಿರ ಬೇಕೆಂದು ಉಭಯ ಆಚಾರ್ಯರು ಹೇಳಿದ್ದರು. ಮಾತಿನ ಗುತ್ತಿಗೆಯನ್ನೆಲ್ಲ ಮಾಧವಾಚಾರಿಯೇ ವಹಿಸಿದ್ದ.

ಕನ್ಯಾ ಪರೀಕ್ಷೆ ನಡೆಯುವಂತೆ ವರ ಪರೀಕ್ಷೆಯೂ ಏರ್ಪಾಟಾದರೆ ಮೇಲು. ಕನ್ಯೆಯ ರೂಪ, ವಿದ್ಯೆ, ಸಂಗೀತ, ಮುಂತಾದವುಗಳನ್ನು ನೋಡುವಂತೆ ವರನ ವಿಚಾರವಾಗಿಯೂ ಕೂಲಂಕುಷ ಪರೀಕ್ಷೆ ಆಗುವುದು ಒಳ್ಳೆಯದು.

ಅಂದಿನ ಒಂದು ತಿಂಗಳಿಗೆ ಮದುವೆ ನಿಷ್ಕರ್ಷೆಯಾಯಿತು. ಹುಡುಗನಿಗೆ ಎರಡು ಸಾವಿರ ರೂಪಾಯಿ ವರದಕ್ಷಿಣೆ ಕೊಡಬೇಕೆಂತಲೂ, ಹುಡುಗನ ತಂದೆ ಕನ್ಯೆಗೆ ಮೂರು ಪಾವು ಬಂಗಾರ ಹಾಕಬೇಕೆಂತಲೂ ಒಪ್ಪಂದವಾಯಿತು. ಮದುವೆ ಬಿದಿರಹಳ್ಳಿಯಲ್ಲಿ ಜರಗುವುದೆಂದೂ, ವರನ ಕಡೆಯವರು ಎರಡು ದಿನ ಮುಂಚಿತವಾಗಿ ಬರಬೇಕೆಂದೂ ಗೊತ್ತಾಯಿತು.

ಗೋದೂಬಾಯಿಯ ಮತ್ತು ಪ್ರಾಣೇಶನ ವಿವಾಹ ಸಾಂಗವಾಗಿ ಜರುಗಿತು. ಮಾಧವಾಚಾರಿಯ ಮೆಹನತ್ತಿಗಾಗಿ ದೇಸಾಯಿಯವರು ಒಂದು ಜೊತೆ ನಾಗಪುರಿ ಅಂಚಿನ ಧೋತ್ರ, ಒಂದು ನೂರು ರೂಪಾಯಿ ಕಾಣಿಕೆ ಕೊಟ್ಟರು. ಹಿಂದೆ ನಡೆದ ಮದುವೆಯಲ್ಲಿ ತಾವು ಕೊಡಬೇಕಾಗಿದ್ದ ಸಂಭಾವನೆ ಕೊಟ್ಟಿದ್ದಾಗಿದೆಯೆಂದೂ, ಈ ಮದುವೆಯಲ್ಲಿ ಒಂದು ಜೊತೆ ಧೋತ್ರ ಸಾಕೆಂದೂ ವೆಂಕೋಬಾಚಾರ್ಯರು ಅಷ್ಟನ್ನು ಮಾತ್ರ ಕೊಟ್ಟರು. ಈ ಕೇಸಿನಿಂದ ಇನ್ನಾವ ಹಣವೂ ಬರುವುದಿಲ್ಲವೆಂದು ಮಾಧವಾಚಾರಿ ತಿಳಿದಿದ್ದ. ಆದರೂ ಒಂದು ನೂರು ರೂಪಾಯಿ, ಎರಡು ಜೊತೆ ಧೋತ್ರ, ಪುಷ್ಕಳವಾಗಿ ಎಂಟು ದಿನ ಸಮಾಚೀನವಾದ ಭೋಜನ ಯಾರನ್ನು ಕೆಡಿಸಿತು?

"ರಾಧಾಬಾಯಿಯನ್ನು ನೀವು ಕರೆದುಕೊಂಡು ಬರಬೇಕು. ತಂದೆ ಮಕ್ಕಳಿಬ್ಬರು, ನೀವು ಮಾಡಿದ ಅನ್ಯಾಯದಿಂದ ನನ್ನ ನಾಲ್ಕು ಮಕ್ಕಳು ಸತ್ತು ಹೋದವು. ಮೊದಲೇ ಈ ವಿಚಾರಗಳೆಲ್ಲ ನಮ್ಮಪ್ಪನಿಗೆ ಗೊತ್ತಿದ್ದರೆ ಅವನೆಂದಿಗೂ ನನ್ನನ್ನು ನಿಮಗೆ ಧಾರೆಯೆರೆಯುತ್ತಿರಲಿಲ್ಲ."

"ಆಗಹೋಗದ ಮಾತಿನಿಂದೇನು ಪ್ರಯೋಜನ? ಆ ಮಕ್ಕಳಿಗೆ ನಮ್ಮ ಸಡುವೆ ಇರಲು ಪುಣ್ಯವಿರಲಿಲ್ಲ, ಅವು ಸತ್ತು ಹೋದವು."

"ಆ ಪುರಾಣ ನನಗೆ ಬೇಕಿಲ್ಲ. ಇಲ್ಲ ಎಂತ ನಿರ್ಧಾರವಾಗಿ ಹೇಳಿಬಿಡಿ. ನಾನು ನಮ್ಮಪ್ಪನ ಮನೆಗೆ ಹೋಗುತ್ತೇನೆ. ನನಗೆ ಅನ್ನ ಬಟ್ಟೆಗೇನೂ ಕೊರತೆ ಇಲ್ಲ. ಅಪ್ಪನೂ ನನಗೆ ಮೋಸಮಾಡಿದ. ನನ್ನ ಸಾಕು ಸಲಹುವ ಭಾರ ಅವನದೇ ಆಗಿದೆ."

ಇಂಥ ಕಲಹಗಳು, ಮರಿಯುದ್ಧಗಳು ದಿನವೂ ಜರುಗುತ್ತಿದ್ದವು. ಗೋದಾವರಿಬಾಯಿ ಗಂಡನ ಮನೆಗೆ ಬಂದ ಮೂರು ತಿಂಗಳಲ್ಲಿಯೇ ಗರ್ಭವತಿಯಾದಳು. ತೌರೂರಿಗೆ ಬಾಣಂತಿತನಕ್ಕೆ ಹೋಗಿ ಗಂಡನ ಮನೆಗೆ ಬರುವಾಗ ಚಿನ್ನದಂಥ ಮಗುವನ್ನು ಕಂಕುಳಲ್ಲಿ ಎತ್ತಿಕೊಂಡು ಬಂದಳು. ಆದರೆ ಮಗು ಎರಡು ತಿಂಗಳೆನ್ನುವ ಹೊತ್ತಿಗೆ ಇಹಲೋಕಯಾತ್ರೆ ಮುಗಿಯಿಸಿತು ಇದರಂತೆ ಗೋದಾವರಿಬಾಯಿಯ ಮೂರು ಮಕ್ಕಳು — ಎರಡು ಹೆಣ್ಣು, ಎರಡು ಗಂಡು ಸತ್ತುಹೋದವು.

ಗೋದಾವರಿಬಾಯಿ ಗಂಡನ ಮನೆಗೆ ಬಂದ ಒಂದು ತಿಂಗಳ ಅವಧಿಯಲ್ಲಿ ತನ್ನ ಬಾಳಿನ ನೀರಸತೆಯನ್ನು ಕಂಡಳು. ತಾನು ಕಟ್ಟಿದ ಆಶಾಗೋಪುರಗಳು ಪುಡಿಯಾದುದನ್ನು ನೋಡಿದಳು. ರಾಧೆಯನ್ನು ಹಣದ ಆಸೆಗಾಗಿ ಬಿಟ್ಟ ಸದಾಚಾರ ಕರ್ಣಾಕರ್ಣಿಯಾಗಿ ಆಕೆಗೆ ತಿಳಿಯಿತು. ಪ್ರಾಣೇಶ ಒಂದು ನಿರ್ಗಂಧ ಕುಸುಮ, ಮುತ್ತುಗದ ಹೂವೆಂದು ತಿಳಿಯಲು ಅವಳಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಮನೆಗೆ ಬಂದ ಕೆಲ ದಿನಗಳವರೆಗೆ

ವೆಂಕೋಬಾಚಾರಿ ಸೊಸೆಯ ಮೇಲೆ ಎಲ್ಲಿಲ್ಲದ ಪ್ರೇಮ ತೋರಿದ. ಅವಳ ಕೆಲಸಬೊಗಸೆಗಳನ್ನು ಮುಕ್ತ ಕಂಠದಿಂದ ಹೊಗಳಿದ. ಅನಂತರ ಮೇಲೆ ತನ್ನ ಜನ್ಮಸಿದ್ಧ ಹಕ್ಕಾದ ಬೈಗಳಕ್ಕೆ ಆರಂಭಿಸಿದ. ಕಾರ್ಮೋಡ ಆವರಿಸಿದ ಈ ಸಂಸಾರದ ಬೆಳ್ಳಿಯು ಯಾಗೆಂದರೆ ವೆಂಕೂಬಾಯಿಯವರು ಸೊಸೆಯ ನೋವು ಸಂಕಟಗಳನ್ನೆಲ್ಲ ನೀಗಲು ಇವರು ಪ್ರಯತ್ನಿಸುತ್ತಿದ್ದರು. ಸೊಸೆಗೆ ಹೆಚ್ಚಿನ ಕೆಲಸದ ಹೊರೆಯನ್ನು ಹೇರುತ್ತಿರಲಿಲ್ಲ. ಎರಡು ಹೊತ್ತಿನ ಅಡಿಗೆ, ನೀರು ತರುವುದು ವೆಂಕೂಬಾಯಿಯವರಿಗೆ ಕಟ್ಟಿಟ್ಟ ಜಹಗೀರಿ. ಮೇಲ್ಗೆಲಸ ಗಳನ್ನು ಗೋದೂಬಾಯಿ ಮಾಡುತ್ತಿದ್ದಳು. ವೆಂಕೋಬಾಚಾರಿ ತನ್ನ ಮಾತಿನ ಲಹರಿಯನ್ನು ಹಾಗೆಯೇ ಬಿಟ್ಟಾಗ ಒಂದೊಂದು ಬಾರಿ ಸಿಟ್ಟಿಗೆದ್ದು ಇದಿರು ವಾದಿಸುತ್ತಿದ್ದಳು. "ಕಾಲ ಕೆಟ್ಟುಹೋಯಿತು" ಎಂತ ವೆಂಕೋಬಾಚಾರಿ ಹೇಳಿಕೊಂಡು ಸುಮ್ಮನಾಗುತ್ತಿದ್ದ.

ಮನೆಯಲ್ಲಿ ಯಾವಾಗಲೂ ಸ್ಮಶಾನ ಸದೃಶ ಭೀಕರ ಮೌನ ಆವರಿಸಿ ರುತ್ತಿತ್ತು. ಯಾರೂ ಇನ್ನೊಬ್ಬರೊಡನೆ ಮಾತನಾಡುವ ಸಾಹಸ ಮಾಡು ತ್ತಿರಲಿಲ್ಲ. ಎಲ್ಲರೂ ಅಪರಿಚಿತರಂತೆ ವರ್ತಿಸುತ್ತಿದ್ದರು. ಪ್ರತಿಯೊಬ್ಬರು ತಮ್ಮ ತಮ್ಮ ವಿಚಾರಗಳನ್ನು ತಮ್ಮ ಮನಸ್ಸಿನಲ್ಲಿಯೇ ಮೆಲಕು ಹಾಕುತ್ತಿದ್ದರು.

ಗೋದೂಬಾಯಿಗೆ ಮನೆಗೆಲಸಗಳಾದರೂ ಹೇಳಿಕೊಳ್ಳುವಂತಹವು ಇರಲಿಲ್ಲ. "ನಾವೆಲ್ಲಾ ಹಳೆಯ ಕಾಲದವರು. ಕಾಫಿ ತಿಂಡಿಯ ಹವ್ಯಾಸ ನಮಗ್ಯಾತಕ್ಕೆ?'' ಎಂದು ಹೇಳಿ ವೆಂಕೋಬಾಚಾರಿ ಕಾಫಿಯ ಕಲಾಪ ವನ್ನೇ ತಪ್ಪಿಸಿದ್ದ. ಮುಗಿಲು ಹರಿದು ಮಳೆ ಬೀಳುತ್ತಿದ್ದರೂ ಎಲ್ಲರೂ ನದಿ ಯಲ್ಲಿ ಸ್ನಾನ ಮಾಡಬೇಕು. ನೀರೊಲೆಗೆ ಉರಿ ಹಾಕುವುದೆಂದರೆ ಹೆಂಗಸರು, ಎಂಟು ದಿನಕ್ಕೋ ಹದಿನೈದು ದಿನಕ್ಕೋ ಒಂದು ಬಾರಿ ಎರೆದುಕೊಂಡಾಗ. ಆಡುವ ಮಕ್ಕಳಿದ್ದರೆ ಮನೆಯಲ್ಲಿ ಕಸ ಕಡ್ಡಿ ಬಿದ್ದೀತು. ಮಕ್ಕಳಾರು ಇಲ್ಲದ್ದ ರಿಂದ ಮನೆ ಯಾವಾಗಲೂ ಚೊಕ್ಕಟವಾಗಿಯೇ ಇರುತ್ತಿತ್ತು.

ಗೋದೂಬಾಯಿ ತಂದೆಯ ಮನೆಗೆ ಮೊದಲನೆ ಬಾರಿ ಗಂಡನ ಮನೆ ಯಿಂದ ಹೋದಾಗ ತನ್ನ ಅತ್ತೆಮನೆಯ ವಿದ್ಯಮಾನವನ್ನೆಲ್ಲ ಅರುಹಿದಳು.

ಕೈಮಿಂಚಿಹೋಗಿತ್ತು. ಈಗ ಏನು ಮಾಡಲು ಸಾಧ್ಯವಿಲ್ಲ "ನೀನು ಪಡೆದದ್ದು ಅಷ್ಟು. ಅದನ್ನೇ ಸರಿಮಾಡಿಕೊಂಡು ಸುಖವಾಗಿರುವ ಪ್ರಯತ್ನ ಮಾಡು ನೀನು ಸುಖವಾಗಿರಲೆಂದೇ ನಾವು ಮಾಡಿದ್ದು ಈ ರೀತಿಯಾಯಿತು ಯತ್ನ ವಿಲ್ಲ. ಮಾಧವಾಚಾರಿ ನಮ್ಮ ಕೊರಳು ಕೊಯ್ದ."

ವೆಂಕೋಬಾಚಾರಿ ಎರಡು ಸಾವಿರ ರೂಪಾಯಿ ವರದಕ್ಷಿಣೆ ತೆಗೆದು ಕೊಂಡರೂ, ತನಗೆ ಬೆಳ್ಳಿಯ ಸಾಮಾನು ಪಾತ್ರೆ ಪಡಗ ಮುಂತಾದವು ಸರಿಯಾಗಿ ಬರಲಿಲ್ಲವೆಂದು ಇನ್ನೂ ಗೊಣಗುತ್ತಿರುತ್ತಾನೆ. ಮೊದಮೊದಲು ಈ ಆಕ್ಷೇಪಗಳನ್ನು ಕೇಳಿ ಗೋದೂಬಾಯಿ ಮನಸ್ಸಿಗೆ ನೊಂದುಕೊಳ್ಳುವಳು, ಅಳುವಳು. ಆಮೇಲಾಮೇಲೆ ತನ್ನ ಮಾವನ ಸ್ವಭಾವವೇ ಅದೆಂದು ತಿರಸ್ಕಾರ ಭಾವ ತಾಳುವಳು. ಪ್ರಾಣೇಶ ಯಾವಾಗಲೂ ತಟಸ್ಥ, ಹೆಂಡತಿಯ ಪರವನ್ನೂ ವಹಿಸುತ್ತಿರಲಿಲ್ಲ. ತಂದೆಯ ಪರವನ್ನೂ ವಹಿಸುತ್ತಿರಲಿಲ್ಲ.

ಒಂದು ದಿನ ಸಂಜೆ ಗೋದೂಬಾಯಿ ಬಟ್ಟೆ ಒಗೆಯಲು ನದಿಗೆ ಹೋಗಿದ್ದಳು ಬಟ್ಟೆಯನ್ನೆಲ್ಲಾ ಒಗೆದದ್ದಾಯಿತು. ಮನೆಗೆ ಹೋಗಲು ಅಣಿಯಾದಳು. ಆರೂವರೆಯಾಗಿತ್ತು. ಯಾರೋ ಒಬ್ಬಾಕೆ ಗೋದೂಬಾಯಿಯ ವಿಚಾರವನ್ನೇ ತೆಗೆದಳು.

"ಗೋದೂಬಾಯಿ ನಾಲ್ಕು ಮಕ್ಕಳನ್ನು ಕಳೆದುಕೊಂಡಳು. ಅದೃಷ್ಟ ಅಂದರೆ ಇಷ್ಟು ಕೆಟ್ಟದಾಗಿರಬಾರದು"

"ಇದರಲ್ಲಿ ಅದೃಷ್ಟ ಏನು ಬಂತು, ವೆಂಕೋಬಾಚಾರಿ ಮಾಡಿದ ಪಾಪ ವನ್ನು ಗೋದೂಬಾಯಿ ತೀರಿಸುತ್ತಿದ್ದಾಳೆ. ಬಂಗಾರದಂತ ಹುಡುಗಿ ರಾಧೆಯನ್ನು ಮನೆ ಬಿಟ್ಟು ದಬ್ಬಿದ. ರಾಧೆ 'ಉಸ್' ಅಂದರೆ ಗೋದೂಬಾಯಿ ಮಕ್ಕಳು ಹೇಗೆ ಬದುಕಿಯಾವು ?" ಇನ್ನೊಬ್ಬಾಕೆ ಸ್ವರ ಸೇರಿಸಿದಳು.

ಗೋದೂಬಾಯಿ ಅವಸವಸರವಲ್ಲಿ ಬಟ್ಟೆಗಳನ್ನು ಹಿಂಡಿಕೊಂಡು ಮನೆಯತ್ತ ಧಾವಿಸಿದಳು.

ಗೋದೂಬಾಯಿ ಅಂದು ರಾತ್ರಿ ಊಟ ಮಾಡಲಿಲ್ಲ. ತಲೆನೋವು ಎಂದು ಮಲಗಿದಳು. ಉಪಚಾರ ಮಾಡಿ ಊಟಕ್ಕೆ ಏಳೆಂದು ಹೇಳುವವರು ಯಾರೂ ಇಲ್ಲ. "ಉಪವಾಸ ಮಾಡಿದರೆ ತಲೆ ನೋವು ಹೋಗುತ್ತೆ" ಎಂದು

ವೆಂಕೋಬಾಚಾರಿ ಹೇಳಿದ. ವೆಂಕೂಬಾಯಿಯವರು ಸೊಸೆಯ ಮೈದಡವಿ "ಊಟ ಬೇಡವಾದರೆ ರವೆ ಗಂಜಿಯನ್ನಾದರೂ ಮಾಡಿಕೊಡುತ್ತೇನೆ" ಎಂದು ಸಮಾಧಾನಪಡಿಸಿದರು. ಗೋದೂಬಾಯಿ ಯಾವ ಮಾತನ್ನೂ ಆಡಲಿಲ್ಲ. ಹೊದೆದ ಹೊದಿಕೆಯ ಮುಸುಕನ್ನು ತೆಗೆಯಲೂ ಇಲ್ಲ. ಪ್ರಾಣೇಶರಿಗೆ ಹೆಂಡತಿಯ ತಲೆನೋವಿನ ವಿಚಾರ ತಿಳಿಯಿತು. ಅವನು ಸುಮ್ಮನಿದ್ದ, ಅಷ್ಟೆ.

"ವೆಂಕೋಬಾಚಾರಿ ಮಾಡಿದ ಪಾಪವನ್ನು ಗೋದೂಬಾಯಿ ತೀರಿಸುತ್ತಿದ್ದಾಳೆ. ಬಂಗಾರದಂಥ ಹುಡುಗಿ ರಾಧೆಯನ್ನು ಮನೆ ಬಿಟ್ಟು ದಬ್ಬಿದ. ರಾಧೆ 'ಉಸ್' ಅಂದರೆ ಗೋದೂಬಾಯಿ ಮಕ್ಕಳು ಹೇಗೆ ಬದುಕಿಯಾವು?"

ಈ ಮಾತುಗಳು ಗೋದೂಬಾಯಿಯ ಕಿವಿಯಲ್ಲಿ ಗಂಟೆಯಂತೆ ಬಾರಿಸುತ್ತಿದ್ದವು. ಇದು ನಿಜವಿರಬಹುದೆ? ಒಂದಲ್ಲ, ಎರಡಲ್ಲ, ನಾಲ್ಕು ಮಕ್ಕಳು! ಒಂದಕ್ಕೆ ಬರೀ ಜ್ವರ ಬಂದಿತ್ತು, ಮಾರನೆಯ ದಿನ ಅದು ಲಟಕ್ಕೆಂದಿತು. ಇನ್ನೊಂದಕ್ಕೆ ಸ್ವಲ್ಪ ಶೀತದ ನೆಪದಿಂದ, ನಾಲ್ಕು ದಿನ ಹಾಸಿಗೆ ಹಿಡಿದು ಸತ್ತು ಹೋಯಿತು. ನಾಲ್ಕು ಮಕ್ಕಳ ಸಾವಿಗೂ ಅಂತಹ ಹೇಳಿಕೊಳ್ಳುವಂತಹ ದೊಡ್ಡ ಕಾಯಿಲೆಗಳು ಬಂದಿರಲಿಲ್ಲ. ಆದರೆ ಸತ್ತವು. ನದಿಯಲ್ಲಿ ಆಕೆ ಹೇಳಿದ ಮಾತು ನಿಜವಿರಬಹುದೇ? ಇರಬಾರದೇಕೆ, ಇದ್ದೇ ಇದೆ. ಯಾವ ಅನ್ಯಾಯವನ್ನೂ ಮಾಡದ ಯಾವ ಪಾಪವನ್ನೂ ಕಾಣದ ರಾಧೆ ಈಕ್ಷಣಕ್ಕೂ 'ಉಸ್' ಅನ್ನುತ್ತಿರುತ್ತಾಳೆ. ಅವಳ ನಿಟ್ಟುಸಿರು ಸವತಿಯಾದ ತನ್ನ ಮಕ್ಕಳ ಆಹುತಿ ತೆಗೆದುಕೊಳ್ಳದೇ ಬಿಟ್ಟೀತೇನು? ಗೋದೂಬಾಯಿಯ ವಿಚಾರ ಲಹರಿ ಈ ತೆರನಾಗಿ ಸಾಗಿತು. ಇದೇ ಬಗೆಯ ಪ್ರಶ್ನೆಗಳನ್ನು ತಾನೇ ಹಾಕಿಕೊಳ್ಳುವಳು, ತಾನೇ ಉತ್ತರವನ್ನು ಕೊಡುವಳು.

ಗೋದೂಬಾಯಿ ಇದುವರೆಗೂ ತನ್ನ ಮಕ್ಕಳ ಸಾವಿನ ಅಂತರಾರ್ಥಕ್ಕೆ ಒಂದು ಸಮಾಧಾನ ಹುಡುಕುತ್ತಿದ್ದಳು. ತನ್ನ ಬೃಹದ್ ಸಮಸ್ಯೆಗೆ ಇಂದು ಉತ್ತರ ದೊರೆಯಿತು. ತನ್ನ ದುಃಖ ನೀಗಲು, ತನ್ನ ನೋವನ್ನಡಗಿಸಲು ಒಂದಾದರೂ ಮಗು ಉಳಿದಿದ್ದರೆ ಚೆನ್ನಾಗಿರುತ್ತಿತ್ತು, ಎಂದು ಒಂದೊಂದು ಸಲ ಆಲೋಚಿಸುವಳು. ಮತ್ತು ಕೆಲವು ಬಾರಿ ತನ್ನನ್ನು ನೋಡಲು ಬಂದಿದ್ದ ಅನೇಕ ಜನಗಳ ಮುಖಗಳು ಅವಳ ದೃಕ್ಪಟದ ಮೇಲೆ ಮಿಂಚಿನ

ವೇಗದಲ್ಲಿ ಹಾದುಹೋಗುವವು. ತನಗೆ ಮೆಚ್ಚಿಕೆಯಾದ ಒಂದು ವರದೊಡನೆ ತಾನು ಸಂಸಾರ ತೂಗುತ್ತಿದ್ದರೆ ಹೇಗಿರುತ್ತಿತ್ತು, ಎಂದು ಕಲ್ಪನಾ ಕುದುರೆಯನ್ನೇರಿ ವಿಹರಿಸುವಳು—ಮತ್ತೆ ನೈಜಲೋಕಕ್ಕೆ ಆ ಕುಮಾರಿ ಬಂದಿಳಿದಾಗ 'ಉಸ್' ಎಂಬ ಗಾಢವಾದ ನಿಟ್ಟುಸಿರು ಭಾರವಾದ ಎದೆಯಿಂದ ಹೊರ ಹೊಮ್ಮುತ್ತಿತ್ತು.

ದಿನದಿವಸಕ್ಕೆ ಬೇಸರ ಹೆಚ್ಚುತ್ತ ಬಂದಿತು. ಮನೆಯಿಂದ ಎಲ್ಲಿಯೂ ಹೋಗಕೂಡದು, ಯಾರೊಡನೆಯೂ ಮಾತನಾಡಕೂಡದು. ಇದು ಮಾವನ ಕಟ್ಟಪ್ಪಣೆ. ಇನ್ನು ತಾನಿದ್ದ ಮನೆಗೆ ಬಂದು ಕಾಗೆ ಸಹ ಕುಳಿಯುತ್ತಿರಲಿಲ್ಲ. ಯಾರಲ್ಲೂ ದುಃಖವನ್ನು ತೋಡಿಕೊಳ್ಳುವಂತಿಲ್ಲ. ಆ ದುಃಖದ ಹೊರೆ ಆ ಪುಟ್ಟ ಹೃದಯದಲ್ಲಿ ಗೂಡು ಕಟ್ಟಿತ್ತು. ವೆಂಕೂಬಾಯಿಯವರಿಗೆ ಸೊಸೆಯ ನೋವಿನ ಅರ್ಥವಾಗಿತ್ತು. ಅವನ್ನು ತೀರಿಸುವ ಸಾಮರ್ಥ್ಯ ಇರಲಿಲ್ಲ.

ರಾಧೆಯ ನಿಟ್ಟುಸಿರಿನಿಂದ ತನ್ನ ನಾಲ್ಕು ಮಕ್ಕಳು ಸತ್ತುಹೋದವು. ಇನ್ನು ಮುಂದೆ ಹುಟ್ಟುವವಾದರೂ ಬದುಕುವವೆಂಬ ನಂಬಿಕೆಯಾದರೂ ಏನು? ಯಾರೋ ಎಸಗಿದ ಪಾಪಕ್ಕೆ ತನ್ನ ಮಕ್ಕಳು ಆಹುತಿಯಾಗಬೇಕೇನು? ಇದು ಖಂಡಿತ ಕೂಡದು. ಆದರೆ ಅದನ್ನು ನಿರೋಧಿಸುವುದಕ್ಕೆ ಮಾರ್ಗಗಳಿವೆಯೇನು? ರಾಧೆಗೆ ಆಗಿರುವ ಅನ್ಯಾಯವನ್ನು ಪರಿಹರಿಸಲು ಉಪಾಯವೇನಿದೆ? ಏನೂ ಇಲ್ಲ. ಚಿಕ್ಕಪ್ಪಂದಿರು ಕಳಿಸಿದ ಅತ್ಯಂತ ಸ್ವಲ್ಪ ಹಣದಲ್ಲಿ ಆ ದೊಡ್ಡ ಸಂಸಾರ ನಿರ್ವಹಣ ಮಾಡಬೇಕು. ತಂದೆಯೂ ತೀರಿದ. ಕದನ್ನ ತಿನ್ನುವುದು, ಚಿಂದಿ ಉಡುವುದು, ದಿನಗಳನ್ನು ಯುಗಗಳಂತೆ ನೂಕುವುದು. ನಿಜ. ರಾಧೆ ಮಾಡಿದ ತಪ್ಪಾದರೂ ಏನು? ತಂದೆ ಹಣ ಕೊಡಲಿಲ್ಲ. ಅವನಲ್ಲಿ ಇರಲಿಲ್ಲ, ಕೊಡಲಿಲ್ಲ. ಅದಕ್ಕವಳೇನು ಮಾಡಬೇಕು? ರಾಧೆಗೆ ನ್ಯಾಯ ದೊರೆಯಬೇಕಾದರೆ ಏನು ಮಾಡಬೇಕು? ಅವಳು ತನ್ನ ಗಂಡನೊಡನೆ ಸಂಸಾರ ಮಾಡಿಕೊಂಡಿರಬೇಕು. ಅದು ಹೇಗೆ ಸಾಧ್ಯ? ತನ್ನ ಗತಿಯೇನು? ರಾಧೆ ದೇವತೆಯಾಗಿದ್ದರೂ ಅವಳು ಸವತಿಯಲ್ಲವೇ? ಸವತಿಯೊಂದಿಗೆ ಬಾಳು ನಡೆಸಲು ತಾನು ಲಗ್ನವಾದಳೇನು? ಇದು ತೀರದ ಸಮಸ್ಯೆ. ಹಾಗಾದರೆ ಸಮಸ್ಯೆ ಬಗೆಹ

ಘುಪವಾದರೂ ಎಂತು ? ಈ ಯೋಚನೆಯ ಗುಂಗಿನಲ್ಲಿ ಅವಳಿಗೆ ನಿದ್ದೆ ಹತ್ತಲಿಲ್ಲ. ಪಕ್ಕದ ಹಾಸಿಗೆಯಲ್ಲಿ ಪ್ರಾಣೇಶ ಮಲಗಿದ್ದ. ಅವನ ಗೊರಕೆಯ ಶಬ್ದ ಕಾಳರಾತ್ರಿಯನ್ನು ಭೇದಿಸುತ್ತಿತ್ತು.

ಅಂದಿನಿಂದ ಗೋದೂಬಾಯಿ ಹಲವು ದಿನ ನಿದ್ದೆಗೆಟ್ಟಳು. ನಿದ್ರಾನಾಶದಿಂದ, ಅತೀವ ಆಲೋಚನೆಯಿಂದ, ಮನೋರೋಗದಿಂದ ಪಟ್ಟಾಗಿ ಹಾಸಿಗೆ ಹಿಡಿದಳು. ಹುಚ್ಚು ಹುಚ್ಚಾಗಿ ಹರಟಲಾರಂಭಿಸಿದಳು. ಹಿಸ್ಟೀರಿಯ ಕಾಯಿಲೆಯಿಂದ ಪಟ್ಟಾಗಿ ಹಾಸಿಗೆ ಹಿಡಿದವಳು ಅವಳಿಗೆ ದೆವ್ವ ಹಿಡಿದಿದೆಯೆಂದು ಊರಿನವರು ಸಾರಿದರು. ಎಲ್ಲ ಊರಿನಲ್ಲಿ ಇರುವಂತೆ ಆ ಊರಿನಲ್ಲಿಯೂ ದೆವ್ವ ಬಿಡಿಸುವವರಿದ್ದಾರೆ. ಅವರಲ್ಲಿ ಖ್ಯಾತಿವೆತ್ತಿನ ಒಬ್ಬನನ್ನು ಕರೆಸಿದ್ದಾಯಿತು. ಅವನು ಬಂದವನೇ ಅರಿಶಿನ ಕುಂಕುಮ, ಇದ್ದಿಲ ಪುಡಿ, ಅಕ್ಕಿ ಹಿಟ್ಟು ಮುಂತಾದವುಗಳಿಂದ ರಂಗ ಬರೆದ. ಎದುರು ಗೋದೂಬಾಯಿಯನ್ನು ಕೂಡಿಸಿ ಅವಳ ಮುಖಕ್ಕೆ ಎಂಥದೋ ಬೂದಿ ಎರಚಿ, ಪಿಟ ಪಿಟ ಏನೇನೋ ಹೇಳಿದ. ಗೋದೂಬಾಯಿ ಸುಮ್ಮನೆ ಎತ್ತಲೋ ನೋಡುತ್ತ ಕುಳಿತಿದ್ದಳು. 'ಹೋಗುತ್ತಿಯೋ ಇಲ್ಲವೋ' ಎಂದವನೇ ಮೊದಲೇ ಸಿದ್ಧಮಾಡಿಕೊಂಡಿದ್ದ ಪೊರಕೆಯಿಂದ ಎರಡು ಸಾರಿ ಬಾರಿಸಿದ. ಗೋದೂಬಾಯಿ ಅರಚಿದಳು, ಕೂಗಿದಳು, ಅತ್ತಳು. 'ಹೋಗುತ್ತೇನೆ' ಅಂತ ಹೇಳಿದಳು. ದೆವ್ವ ಬಿಟ್ಟುಹೋಯಿತೆಂದು ಆ ಮನುಷ್ಯ ಕೇಳಿ ತನಗೆ ಸಲ್ಲಬೇಕಾಗಿದ್ದ ಕಾಣಿಕೆಯನ್ನು ತೆಗೆದುಕೊಂಡು ಮನೆಗೆ ನಡೆದ.

ಗೋದೂಬಾಯಿ ಈಗ ಮೊದಲಿನ ಗೋದೂಬಾಯಿಯಲ್ಲ. ಪೂರ ಅರ್ಧವಾಗಿ ಹೋಗಿದ್ದಾಳೆ. "ನಾಲ್ಕು ದಿನದ ಮಟ್ಟಿಗೆ ತವರುಮನೆಗೆ ಹೋಗಿ ಬರಲಿ. ಹುಡುಗಿ ಬಹಳ ತಾರಿದ್ದಾಳೆ" ಅಂತ ವೆಂಕೂಬಾಯಿಯವರು ಗಂಡನವರು ಹೇಳಿದರು "ತವರುಮನೆಯಿಂದ ಬಂದು ಇನ್ನೂ ಮೂರು ತಿಂಗಳು ತುಂಬಿಲ್ಲ, ಬಸ್ಸು, ರೈಲುಗಳಿಗೆ ದುಡ್ಡು ತರಲು ನಾವೇನು ಶ್ರೀಮಂತರೇ ?" ವೆಂಕೋಬಾಚಾರಿ ಕೊಕ್ಕೆ ಹಾಕಿದ.

ಈ ಅವಧಿಯಲ್ಲಿ ಗೋದೂಬಾಯಿ ಮುಂದೆ ಏನು ಮಾಡಬೇಕೆನ್ನುವದನ್ನು ನಿರ್ಧರಿಸಿಕೊಂಡಿದ್ದಳು. ರಾಧೆಯನ್ನು ಕರೆಸಿಕೊಂಡು ಬರಬೇಕು. ಅವಳಿಗಾದ ಅನ್ಯಾಯವನ್ನು ತಾನು ಪರಿಹರಿಸಬೇಕು. ರಾಧೆ ಸವತಿಯಾಗಿ

ಕಾಡಿಯಾಳೆಂಬ ದಿಗಿಲು ಗೋದೂಬಾಯಿಗೆ ಇಲ್ಲ. ಇಷ್ಟು, ಕಷ್ಟ, ಕಾರ್ಪಣ್ಯ ಸೋಸಿದ ಅವಳು ಎಂದಿಗೂ ಕಾಡಲಾರಳು. ಒಂದು ವೇಳೆ ಕಾಡಿದರೆ....... ಅದರಿಂದ ಆಗುವದಾದರೂ ಏನು? ಈಗಲಂತೂ ಮನೆಯಲ್ಲಿ ನರಕವನ್ನು ಅನುಭವಿಸುತ್ತಿದ್ದಾಳೆ. ಇದಕ್ಕಿಂತ ಹೆಚ್ಚಿನ ನರಕ ಉಂಟಾಗುವದಿಲ್ಲವೆಂಬ ನಂಬಿಕೆ ಅವಳಿಗಿದ್ದಿತು. ರಾಧೆಯ ಶಾಪದಿಂದ ತಾನು ವಿಮೋಚಿತಳಾದರೆ ತನ್ನ ಸಂತಾನ ನಿಂತರೂ ಸಿಕ್ಕಬಹುದೆಂಬ ಒಂದು ಆಶೆ ಆ ಹೃದಯ ಮರುಭೂಮಿಯ ಎಲ್ಲೋ ಒಂದು ಮೂಲೆಯಲ್ಲಿ ಅಂಕುರಿಸಿತ್ತು.

ತನ್ನ ನಿರ್ಧಾರವನ್ನು ಪ್ರಾಣೇಶನ ಎದಿರು ಹೇಳಿದಳು. ಅವನು ಎಂದಿನಂತೆಯೇ ಅದು ಸಾಧ್ಯವಿಲ್ಲ ಎಂತ ಉತ್ತರ ಕೊಟ್ಟ. ಬಲವಾಗಿ ಪಟ್ಟು ಹಿಡಿದಳು. ಕಾಡಿದಳು, ಬೇಡಿದಳು, ಅತ್ತಳು. ಮಾನವರೂಪಿ ಶಿಲೆಯೆದುರು ಅವಳ ಆಟ ನಡೆಯಲಿಲ್ಲ. ಕೊನೆಯದಾಗಿ ಈ ವಿಚಾರವನ್ನು ಮಾವನವರಿಗೆ ಹೇಳಿಬಿಡಬೇಕೆಂದು ಕೇಳಿಕೊಂಡಳು. ಮಾವನಿಗೆ ಹೇಳುವುದರಿಂದ ಯಾವ ಪ್ರಯೋಜನವೂ ಆಗುವುದಿಲ್ಲವೆಂದು ಅವಳಿಗೆ ಗೊತ್ತಿತ್ತು. ಆದರೆ ಮಾಡುವ ಕೆಲಸವನ್ನು ಓರಣವಾಗಿ ಮಾಡಬೇಕೆಂಬುದೇ ಅವಳ ಗುರಿಯಾಗಿತ್ತು. ತಂದೆಗೆ ಈ ವಿಷಯ ಹೇಳಲು ಪ್ರಾಣೇಶ ನಿರಾಕರಿಸಿದ. ಗೋದೂಬಾಯಿಯ ಪಟ್ಟು ಬಲವಾಯಿತು. ಕಣ್ಣಿಗೆ ಹಚ್ಚಿದ ಸೀರೆಯ ಸೆರಗನ್ನು ಅವಳು ತೆಗೆಯುತ್ತಲೇ ಇರಲಿಲ್ಲ. ಪ್ರಾಣೇಶ ಗಟ್ಟಿ ಧೈರ್ಯ ಮಾಡಿ ಅಪ್ಪನಿಗೆ ಹೇಳಿದ. ವೆಂಕೋಬಾಚಾರಿ ಸಿಡಿಲಿನಂತೆ ಆರ್ಭಟಿಸಿದ. ಇದರಲ್ಲಿ ತನ್ನ ಕೈವಾಡ ಏನೂ ಇಲ್ಲವೆಂದೂ, ತನ್ನ ಹೆಂಡತಿಯ ಒತ್ತಾಯದಿಂದ ತಾನು ಹೇಳಿದ್ದಾಗಿಯೂ ಪ್ರಾಣೇಶ ತಿಳಿಸಿದ. ಎಲ್ಲರನ್ನೂ ಒದ್ದು ಹೊರಗೆ ಹಾಕುವುದಾಗಿ ವೆಂಕೋಬಾಚಾರಿ ಕೂಗಾಡಿದ.

ಗೋದೂಬಾಯಿ ತನ್ನ ಅಂತ್ಯ ನಿರ್ಧಾರವನ್ನು ಪ್ರಾಣೇಶನಿಗೆ ತಿಳಿಸಿದಳು. ರಾಧಾಬಾಯಿಯನ್ನು ಕರೆದುಕೊಂಡು ಬರದಿದ್ದರೆ ತಾನು ತವರು ಮನೆಗೆ ಹೋಗುವುದು ಖಂಡಿತ.

*

*

೭

"ನಾನು ಒಂದು ಬಿಡಿಕಾಸು ಕೊಡುವುದಿಲ್ಲ, ನಿನ್ನಿಂದ ನನಗೆ ಅಗಾಧವಾದ ನಷ್ಟ ಆಯಿತು. ನನ್ನ ಮನೆತನವೇ ಹಾಳಾಯಿತು."

"ನಾನು ತೀರ ನಿರ್ಗತಿಕ ಸ್ಥಿತಿಗೆ ಬಂದಿದ್ದರಿಂದ ನಿಮ್ಮ ಮನೆ ಮೆಟ್ಟಲು ಹತ್ತಬೇಕಾಯಿತು ಊರಲ್ಲಿ ತಲೆಹಾಕಿದರೆ ಜನ ಸಿಡಿ ಇಟ್ಟು ಶಪಿಸುತ್ತಾರೆ. ಏನೋ, ನನ್ನಿಂದ ನೀವು ಉಪಕಾರ ಹೊಂದಿದ್ದೀರಿ. ದೇಸಾಯಿಯವರಿಗೆ ಸುಳ್ಳು ಹೇಳಿ ಅವರ ಮಗಳನ್ನು ನಿಮ್ಮ ದಡ್ಡ ಪ್ರಾಣೇಶನಿಗೆ ಕೊಡಿಸಿದೆ. ಅವರಿಂದ ನಿನಗೆ ಎರಡು ಸಾವಿರ ರೂಪಾಯಿಗಳು ಬಂದವು. ಶ್ರೀನಿವಾಸಾಚಾರಿಯಿಂದಲೂ ನಿನಗೆ ಐದುನೂರು ರೂಪಾಯಿ ಸಂದಾಯವಾಗಿವೆ. ಅದೆಲ್ಲಾ ಹೋಗಲಿ, ನನ್ನ ನಿಮ್ಮ ಹಳೆಯ ಸ್ನೇಹದ ನೆನಪಿಗಾದರೂ ನನಗೆ ಸ್ವಲ್ಪ ಸಹಾಯಮಾಡಿ"

"ಇಲ್ಲ ನಾನು ಈಗ ಪಳ್ಳಿಗೆ ಹೊರಟಿದ್ದೇನೆ. ಯಾವುದೋ ಮದುವೆ ಮಾಡಿಸುವುದಿದೆ"

"ಕಾಲೆಳೆದುಕೊಂಡು ಬರಲಾರದೆ ಬಂದಿದ್ದೇನೆ. ನಿಮ್ಮ ಧರ್ಮಬುದ್ಧಿಗೆ ತೀಳಿದಷ್ಟು ಕೊಡಿ"

"ಧರ್ಮವೂ ಇಲ್ಲ, ಬುದ್ಧಿಯೂ ಇಲ್ಲ, ತೊಲಗು ಇಲ್ಲಿಂದ ಮೊದಲು"

"ಮಾರುತಿರಾಯ, ಏನು ಹೊತ್ತು ಕೊಟ್ಟೆಪ್ಪ!"

ಇಸ್ಪೀಟ್ ಆಟ, ಜೀವನ, ಎರಡೂ ಒಂದೆ. ಇಸ್ಪೀಟಿನಲ್ಲಿ ದುಡ್ಡು ಸೋತವನು, ಕಳೆದುಕೊಂಡ ದುಡ್ಡನ್ನು ವಾಪಸು ಪಡೆಯಲು ಯತ್ನಿಸುತ್ತಾನೆ. ಗೆದ್ದವನು ಇನ್ನೂ ಹೆಚ್ಚು ಬರಲೆಂದು ಆಡುತ್ತಾನೆ. ಅಸಲು ಸರಿಯಾಗಿದ್ದವನು ಎರಡರಲ್ಲಿ ಒಂದಾಗಲೆಂದು ಆಡುತ್ತಾನೆ. ಜೀವನದಲ್ಲಿಯೂ ಅಷ್ಟೆ. ಕಡಿಮೆ ಹಣವುಳ್ಳವರು ಸ್ವಲ್ಪ ಜಾಸ್ತಿಯಾಗಲೆಂದೂ, ಜಾಸ್ತಿ ಇದ್ದವರು ಇನ್ನೂ ಹೆಚ್ಚಲೆಂದೂ, ಸಮವಾಗಿದ್ದವರು ಒಂದು ಕೈ ನೋಡಿಯೇ ಬಿಡಬೇಕೆಂದು ನುಗ್ಗುತ್ತಾರೆ. ಇದರಂತೆ ಮಾಧವಾಚಾರಿ ಅದರಿವರಿಗೆ ಮೋಸಮಾಡಿ

ತಲೆಯಮೇಲೆ ಕೈ ಎಳೆದು ಸರ್ವ ವಿಧಗಳಲ್ಲಿಯೂ ಹಣ ಸಂಪಾದಿಸಿದ್ದ. ದುರ್ವ್ಯಾಜ್ಯ ಅಂದರೆ ಅವನಿಗೆ ನೀರು ಕುಡಿದಂತೆ.

ಯಾವುದೋ ಒಂದು ದುರ್ವ್ಯಾಜ್ಯದಲ್ಲಿ ಪೂರಾ ಪೆಟ್ಟು ತಿಂದ. ಅವನ ಮೇಲೆ ಯಾರೊ ಕೇಸು ಹಾಕಿದರು. ಅದರಲ್ಲಿ ಪೂರ ಪೆಟ್ಟು ತಿಂದ. ಇದ್ದ ಬಿದ್ದ ಆಸ್ತಿಯೆಲ್ಲ ಹೊರಟುಹೋಯಿತು. ಮನೆಯ ಮೇಲಿದ್ದ ಕಂಚು, ಗಳ ಸಹ ಹರಾಜಾದವು. ಆಚಾರಿಯನ್ನು ಯಾವುದಾದರೂ ಒಂದು ಕೇಸಿನಲ್ಲಿ ಸಿಕ್ಕಿಸಿಕೊಂಡು ಅವನನ್ನು ಬಲಿಹಾಕಬೇಕೆಂದು ಕಾದಿದ್ದ ಜನ, ಅವನು ಸಿಕ್ಕಕೂಡಲೇ ಮೇಲೇಳದಂತೆ ಆಳಿಗೊಂದು ಕಲ್ಲು ಹಾಕಿದರು. ನಿಜವಾದ ಮತ್ತು ಸುಳ್ಳು ಸಾಕ್ಷಿಗಳೆಲ್ಲ ಅವನ ವಿರುದ್ಧವಾಗಿ ತಲೆ ಎತ್ತಿದವು. ಇಡೀ ಊರೊಂದು ಕಡೆ, ಅವನೊಂದು ಕಡೆ ಅವನ ಮೇಲಿದ್ದ ಸೇಡನ್ನು ಊರಿನವರು ತೀರಿಸಿಕೊಂಡರು. ವಕೀಲರುಗಳಿಗೆ ತೆತ್ತು, ಅವನು ಕೂಡಿಟ್ಟ ಹಣ ಕರಗಿದ್ದಲ್ಲದೆ, ಸ್ಥಿರ ಚರಾಸ್ತಿಗಳೂ ತೂರಿಹೋದವು. ಆಚಾರಿ ನೆಲ ಹತ್ತಿದ.

ನಮ್ಮ ದೇಶವು ಎಲ್ಲ ವಿಷಯಗಳಲ್ಲಿಯೂ ಹಿಂದೆ ಬಿದ್ದಿದ್ದರೂ ದುರ್ವ್ಯಾಜ್ಯಗಳಲ್ಲಿ ಎಲ್ಲ ದೇಶಗಳನ್ನೂ ಮೀರಿಸಿ ತನ್ನದೇ ಆದ ಒಂದು ವಿಶಿಷ್ಟ ರೆಕಾರ್ಡ್ ಸ್ಥಾಪಿಸಿದೆ. ಎಷ್ಟೋ ಮನೆತನಗಳ ಅಸ್ತಿವಾರಗಳು ಇಂಥ ದುರ್ವ್ಯಾಜ್ಯಗಳಿಂದ ಕಳಚಿಹೋಗಿವೆ. ಎಷ್ಟೋ ಕೇಸುಗಳು ವಂಶಪರಂಪರಾನುಗತವಾಗಿ ನಡೆದುಕೊಂಡು ಬರುತ್ತಿರುತ್ತವೆ. ಆಚಾರಿ ನೆಲ ಹತ್ತಿದ್ದನ್ನು ನೋಡಿ ಜನಕ್ಕೆ ಏನೋ ಒಂದು ತರಹ ಸಮಾಧಾನ. ನ್ಯಾಯವು ತಕ್ಕ ರೀತಿಯಲ್ಲಿ ಇತ್ಯರ್ಥವಾಯಿತೆಂದು ತಿಳಿದರವರು.

ಆಚಾರಿಗೆ ಮಧ್ಯಾಹ್ನಕ್ಕೂ ಇಲ್ಲದಾಯಿತು. ಎಲ್ಲವೂ ದೇವರ ಲೀಲೆ ಎಂದುಕೊಂಡ. ಅದೃಷ್ಟ ಹೀಗೆಲ್ಲಾ ಮಾಡಿಸಿತು ಎಂತ ಹೇಳಿದ. ಆದರೂ ಹಣದ ಆಘಾತವನ್ನು ತಡೆಯಲಾರದೆ ತತ್ತರಿಸಿಹೋದ. ಮೈಯಲ್ಲಿ ನರದೌರ್ಬಲ್ಯ, ನಿದ್ರಾನಾಶ ಮುಂತಾದ ಕಾಯಿಲೆಗಳು ಕಾಣಿಸಿಕೊಂಡವು. ಪಾರ್ಶ್ವವಾಯು ಹೊಡೆಯಿತು.

ಹಣ ಕೂಡಿಡುವ ಅಭ್ಯಾಸ ಇರುವಂತೆ ಕಳೆದುಕೊಳ್ಳುವ ಅನುಭವವೂ ಮನುಷ್ಯನಿಗೆ ಸ್ವಲ್ಪ ಇರಬೇಕು. ಇದ್ದ ಹಣ ಎಲ್ಲ ಹೋದಮೇಲೆ ಮಾಧವಾ

ಚಾರಿ ಎದೆ ಒಡೆದ. ಮೊದಲಿನಂತೆ ಇವನ ಬೇಳೆ ಈಗ ಬೇಯುತ್ತಿರಲಿಲ್ಲ. ಎಲ್ಲರಿಗೂ ಇವನ ವಿಚಾರ ಸಾಕಷ್ಟು ತಿಳಿದಿತ್ತು. ಕುರಿಗಳು ಚಿಕ್ಕದಾದವು. ಇವನ್ನೆಲ್ಲಾ ಅವನು ಸ್ಪಷ್ಟವಾಗಿ ಅರಿತುಕೊಂಡು ದೇವಸ್ಥಾನ ಕಟ್ಟಿಸುವ ಹೊಸ ಹೂಟವನ್ನು ಹೂಡಿದ.

ತಾನಿದ್ದ ಮನೆಗೆ ಸೇರಿದಂತೆ ಬೇಕಾದಷ್ಟು ಪಾಳು ಜಾಗ ಇತ್ತು. ಹೆರವರ ಹಣದಲ್ಲಿ ಇಲ್ಲೊಂದು ದೊಡ್ಡ ಮನೆ ಕಟ್ಟಿಸುವುದು, ಅದರ ಅಂಚಿನಲ್ಲೊಂದು ಕಡೆ, ಒಂದೇ ಅಂಕಣದಲ್ಲಿ ಮಾರುತಿರಾಯನ ಗುಡಿ ಕಟ್ಟಿಸುವುದು ಎಂದು ಮಾಧವಾಚಾರಿ ಲೆಕ್ಕ ಹಾಕಿದ. ಮೊದಲು ಈ ವಿಚಾರವನ್ನು ಅದರೊಂದಿಗೆ ಸ್ವಪ್ನ ವೃತ್ತಾಂತವನ್ನು ಊರಿನಲ್ಲಿ ಹರಡಿದ. ಜನ ಗಹಗಹಿಸಿ ನಕ್ಕಿತು. "ಇದುವರೆಗೆ ನಮಗೆ ಶನಿಯಾಗಿ ಕಾಡಿದ, ಈಗ ಹನುಮಂತ ದೇವರಿಗೆ ಬೆನ್ನು ಹತ್ತಿದ್ದಾನೆ." ಎಂದರು. ಊರಿನಲ್ಲಿ ಎಲ್ಲಿಯೂ ಬಿಡಿಗಾಸು ಹುಟ್ಟಲಿಲ್ಲ. ಆದರೂ ಮಾಧವಾಚಾರಿ ಧೃತಿಗೆಡಲಿಲ್ಲ

ತನ್ನಿಂದ ಅಕಸ್ಮಾತ್ತಾಗಿ ಯಾರಾದರೂ ಲಾಭ ಹೊಂದಿದವರಿದ್ದರೆ ಅವರಿಂದ ಏನಾದರೂ ಅಲ್ಪಸ್ವಲ್ಪ ಪ್ರಾಪ್ತಿ ಮಾಡಿಕೊಳ್ಳಬೇಕೆಂದು ಅವರ ಮನೆಗಳಿಗೆ ಎಡತಾಕಿದ. ಆದರೆ ಯಾರೂ ಅವನನ್ನು ಹತ್ತಿರ ಸೇರಿಸಲಿಲ್ಲ. ಅವಾಚ್ಯ ಶಬ್ದಗಳಿಂದ ಅವನನ್ನು ಹೊರಗಟ್ಟಿದರು.

ಮಾಧವಾಚಾರಿಯಿಂದ ವೆಂಕೋಬಾಚಾರಿಗೆ ಲಾಭವಾಗಿತ್ತು. ಎಲ್ಲಕ್ಕೂ ಹೆಚ್ಚಾಗಿ ಪ್ರಾಣೇಶ ಎರಡನೆಯ ಮದುವೆ ಕಂಡಿದ್ದು ಮಾಧವಾಚಾರಿಯ ಮಾತಿನ ಚಳಕದಿಂದ. ಪ್ರಾಣೇಶನಿಗೆ ಎರಡನೆಯ ಬಾರಿ ಮದುವೆಯಾದ್ದನ್ನು ಕೇಳಿ "ಸಿಂಬಳಬುರುಕನಿಗೆ ಯಾಕೆ ಇಬ್ಬರು ಹೆಂಡಿರು" ಅಂದಿತು ಜನ.

ಪಾರ್ಶ್ವವಾಯು ಬಂದ ಮೇಲೆ ಮಾಧವಾಚಾರಿಗೆ ಹೊತ್ತಿಗೆ ಹಿಡಿ ಕೂಳಿಲ್ಲದೆ ಸಾಯುವ ಪರಿಸ್ಥಿತಿ ಒದಗಿತು. ಈಗ ಹೊನ್ನಾಳಿಯ ಜನಕ್ಕೆ ಮಾತಿಗೆ ಆಹಾರ ದೊರೆಯಿತು. ಮಾಧವಾಚಾರಿಯ ಜನವಲ್ಯ, ಅನಾನುಕೂಲಗಳನ್ನೇ ರಸವತ್ತಾಗಿ ಆಡಿಕೊಳ್ಳುತ್ತಿದ್ದಾರೆ.

*

*

# ೭

"ನಾನೊಂದು ಕೊಡ ಕೊಡುತ್ತೇನೆ"

"ಒಂದು ಹಂಡೆ ನನ್ನದಾಗಿರಲಿ"

"ಒಂದು ತಪ್ಪಲೆ, ಎರಡು ಚಂಬು ನನಗಿರಲಿ"

ಹೀಗೆ ಹೊನ್ನಾಳಿಯ ಊರಿನ ಕೆಲವರು ಹೇಳಿದರು.

ಪ್ರಾಣೇಶನಿಗೆ ಗೋದೂಬಾಯಿಯ ಕಾಟ ವಿಪರೀತವಾಯಿತು. ರಾಧೆಯನ್ನು ಕರೆದುಕೊಂಡು ಬರಬೇಕು. ಇಲ್ಲವಾದರೆ ತಂದೆಯ ಮನೆಗೆ ಹೋಗುತ್ತೇನೆ ಅವರು ಒಂದು ವೇಳೆ ಮನೆ ಬಿಟ್ಟು ದಬ್ಬಿದರೆ ನದಿಯಲ್ಲಿ ಬಿದ್ದು ಪ್ರಾಣ ಬಿಡುತ್ತೇನೆ. ಇದು ಅವಳ ಸತ್ಯ ಸಂಕಲ್ಪ. ಈ ಸಂಕಲ್ಪ ವೆಂಕೋಬಾಚಾರಿಯ ಕಿವಿಗೆ ಬಿದ್ದಿತು. "ಈ ನಾಯಿ ಹೋದರೆ ಇನ್ನೊಂದು ನಾಯಿ ತರುತ್ತೇನೆ. ದುಡ್ಡಿದ್ದರೆ ಹೆಣ್ಣಿಗೇನು ಕಮ್ಮಿ...." ಇದು ಅವನ ಹೆಮ್ಮೆಯ ಮಾತು. ಇದಕ್ಕೆ ಉತ್ತರ ಕೊಡಬೇಕೆಂದು ಅವಳ ನಾಲಿಗೆ ಮುಂದೆ ಚಾಚಿತು. ಆದರೆ ಮನಸ್ಸು ಕಡಿವಾಣ ಹಿಡಿದೆಳೆಯಿತು ಆಡುವುದಕ್ಕಿಂತ ಮಾಡಿ ತೋರಿಸುವುದು ಒಳ್ಳೆಯದೆಂದು ಅವಳ ಅಂತರಾತ್ಮ ಬೋಧಿಸಿತು. "ಗಂಡಸರ ಅಂಥ ಮಾತುಗಳನ್ನೇ ಆಡುತ್ತಾರೆ. ನಾವು ಅವಕ್ಕೆಲ್ಲಾ ಕಿವಿಗೊಡಬಾರದು. ಮನಸ್ಸು ನೋಯಿಸಕೊಳ್ಳಬಾರದು. ಹೆಣ್ಣಾಗಿ ಹುಟ್ಟಿದ ಮೇಲೆ ಇಂಥ ಮಾತುಗಳನ್ನು ನಾವು ಕೇಳಬೇಕು" ಇದು ವೆಂಕೂಬಾಯಿಯವರ ಉವಾಚ. ಇದಕ್ಕೂ ಗೋದೂಬಾಯಿ ತುಟಿ ಪಿಟಕ್ಕೆನ್ನಲಿಲ್ಲ.

ಪ್ರಾಣೇಶನಿಗೆ ಗೋದೂಬಾಯಿಯ ಕಿರುಕುಳ ತುಂಬಾ ಹೆಚ್ಚಾಯಿತು. ತನಗೆ ಬೇಕಾದ, ಸಹೋದ್ಯೋಗಿಯಾದ ಮೇಷ್ಟರ ಬಳಿಗೆ ಹೋಗಿ ತನ್ನಳಲನ್ನು ತೋಡಿಕೊಂಡ. ಅವರು ಹೇಳಿದ ವಚನಕ್ಕೆ ಕಿವಿಗೊಡುವುದಾಗಿಯೂ, ಅವರು ಹೇಳಿದಂತೆ ನಡೆಯುವುದಾಗಿಯೂ ಒಪ್ಪಿಕೊಂಡ ಮೇಷ್ಟರು ಕೊಂಚ ಆಲೋಚಿಸಿ ಹೇಳಿದರು "ಹೆದಿಯ ಜಿಸ್ತು ಕಟ್ಟಬಾರದು, ಹೇಸಿಯ ಮದುವೆಗೆ ಹೋಗಬಾರದು, ಅಂತ ಗಾದೆಯ ಮಾತಿದೆ. ನೀನು ಹೇಡಿಯಾ

ಹೌದು, ಹೇಸಿಯೂ ಹೌದು ನಿನ್ನ ಬೆನ್ನು ಕಟ್ಟಿದರೆ ಬರೀ ನಿಷ್ಠೂರ, ಅಪವಾದ ಇವೇ ನನಗೆ ಪ್ರಾಪ್ತಿಯಾಗುತ್ತವೆ ಎನ್ನುವುದು ನನಗೆ ಗೊತ್ತು, ಆದರೆ ರಾಯರ ಆಣೆಯಾಗಿಯೂ ನಾನು ಹೇಳಿದ ತೀರ್ಮಾನಕ್ಕೆ ನೀನು ಬರಬೇಕು. ನಿನಗೆ ಒಳ್ಳೆಯದನ್ನೇ ಕೋರುತ್ತೇನೆ. ಒಳ್ಳೆಯದನ್ನೇ ಮಾಡುತ್ತೇನೆ.”

“ಆಗಲಿ ಮೇಷ್ಟರೆ, ನಿಮ್ಮ ಸ್ವಭಾವ ನನಗೆ ಚೆನ್ನಾಗಿ ಗೊತ್ತಿದೆ, ಖಂಡಿತ ವಾಗಿಯೂ, ರಾಯರ ಆಣೆಯಾಗಿಯೂ ನಿಮ್ಮ ಮಾತು ಕೇಳುತ್ತೇನೆ. ನಿಮ್ಮ ಮಾತಿನಲ್ಲಿ ವಿಶ್ವಾಸ ಇದ್ದದ್ದರಿಂದಲೇ, ನಾನೆಲ್ಲೂ ಹೋಗದೆ ನಿಮ್ಮ ಹತ್ತಿರ ಬಂದಿದ್ದೇನೆ.”

“ಹಾಗೆ ದಾರಿಗೆ ಬಾ. ರಾಧೆಯನ್ನು ನೀನು ಬಿಟ್ಟದ್ದು ಶುದ್ಧಾಂಗ ತಪ್ಪು ನಿನ್ನ ತಂದೆ ಬೇಡವೆಂದಿದ್ದರೂ, ನೀನೇ ಧೈರ್ಯದಿಂದ ಬೇರೆ ಮನೆ ಮಾಡಿ ಅವಳನ್ನು ಕರೆದುಕೊಂಡು ಬರಬೇಕಾಗಿತ್ತು. ಅಪ್ಪನ ಪುಡಿಕಾಸಿನ ಆಸ್ತಿಗೆ ಜೋಲುಬಿದ್ದು ಹುಡುಗಿಯನ್ನು ಹೊರಕ್ಕೆಯಿಂದ ದಬ್ಬಿದೆ. ಆದದ್ದಾಯಿತು. ಅದರ ಪ್ರಸ್ತಾಪ ಈಗ ಬೇಡ ಗೋದಾಬಾಯಿಯೇ ರಾಧೆಯನ್ನು ಕರೆತರಲು ಹಟ ಹಿಡಿದಿದ್ದಾಳೆಂದು ನೀನು ಹೇಳುತ್ತಿದ್ದೀಯೋ, ಒಳ್ಳೆಯದೇ ಆಯಿತು. ನಿನ್ನ ತಂದೆಯ ಮನೆಯಿಂದ ಹೊರಗೆ ಬಂದು ಬಿಡು ಬೇರೆ ಸಂಸಾರ ಹೂಡು. ರಾಧೆಯನ್ನೂ ಕರೆದುಕೊಂಡು ಬಾ ಸುಖವಾಗಿ ಸಂಸಾರ ಮಾಡಿಕೊಂಡಿರು.

“ಮೇಷ್ಟ್ರೇ, ನೀವು ಹೇಳುವಷ್ಟು ಸುಲಭವೇ ಇವೆಲ್ಲ. ನಾನು ಮನೆ ಯಿಂದ ಹೊರಬಂದ ಕೂಡಲೇ ಅಪ್ಪನ ಆಸ್ತಿಗೆಲ್ಲ ಕಲ್ಲು ಬೀಳುತ್ತದೆಯಲ್ಲ?”

“ಬಿದ್ದರೆ ಬೀಳಲಿ, ನೀನೇನು ಗಂಡಸಲ್ಲವೆ? ನಿನಗೆ ದುಡಿಯುವ ಸಾಮರ್ಥ್ಯ ಇಲ್ಲವೇ?”

“ಆಸ್ತಿ ಹೋದರೆ ಹೋಗಲಿ, ನಾನು ಮನೆ ಮಾಡುವುದು ಹೇಗೆ, ಸಂಸಾರ ಹೂಡುವುದು ಹೇಗೆ?”

“ಅದಕ್ಕೆ ದಾರಿ ಮಾಡೋಣ. ನಿನ್ನಪ್ಪನ ವಿಷಯಕ್ಕೆ ಊರು ಜನ ಸಿಟ್ಟಾಗಿದ್ದಾರೆಯೇ ವಿನಾ ನಿನ್ನ ವಿಷಯಕ್ಕೆ ಯಾರಿಗೂ ದುರಭಿಪ್ರಾಯವಿಲ್ಲ. ನಾಲ್ಕು ಜನರೆದುರು ನಿನ್ನ ವಿಷಯ ಹೇಳುತ್ತೇನೆ. ಅವರ ಸಹಾಯ ತೆಗೆದು ಕೊಂಡು ನಿನ್ನ ಸಂಸಾರ ನಿಲ್ಲಿಸುತ್ತೇನೆ. ನಿಮ್ಮಪ್ಪ ನನ್ನ ಮೇಲೆ ಸಿಟ್ಟು ಮಾಡಿ, ನನ್ನ ಮನೇ ಮೇಲಿನ ಬಿಸಿಲನ್ನು ಎಂದಿಗೂ ಕಸಿದುಕೊಳ್ಳಲಾರ. ಮೊದಲು

ಹೋಗಿ ಗೋದೂಬಾಯಿಗೆ ಸಮಾಧಾನ ಹೇಳು. ರಾಧೆಯನ್ನು ಕರೆದುಕೊಂಡು ಬೇರೆ ಸಂಸಾರ ಹೂಡುವುದಾಗಿ ಹೇಳು. ದೇವರ ದಯೆ ಒಂದಿದ್ದರೆ ಏನಯ್ಯ, ನನ್ನಂಥ ಹತ್ತು ಸಂಸಾರಗಳನ್ನು ಹೂಡಬಹುದು''

* * * *

ಪ್ರಾಣೇಶ ಗೋದೂಬಾಯಿಗೆ ಮೇಷ್ಟರು ಹೇಳಿದ ಸಮಾಚಾರವನ್ನೆಲ್ಲ ತಿಳಿಸಿದ. ಮೇಷ್ಟರ ವಿಷಯವಾಗಿ ಆಕೆಗೆ ಗೌರವವಿತ್ತು. ಇಡೀ ಊರು ಅವರನ್ನು ಗೌರವಿಸುತ್ತಿತ್ತು. ನ್ಯಾಯಪಕ್ಷಪಾತಿಗಳೂ, ಪರೋಪಕಾರಿಗಳೂ ಎಂದು ಅವರು ಖ್ಯಾತಿ ಹೊಂದಿದ್ದರು. ಎಂದೇ ಆಗಲಿ ಅವರು ಸ್ವಾರ್ಥಕ್ಕಾಗಿ ಬಾಯಿ ತೆಗೆದವರಲ್ಲ. ಆದರೆ ಇತರರಿಗೆ ಸಹಾಯ ಮಾಡಬೇಕೆಂದಾಗ ಅವರ ಪರ ವಹಿಸಿ ತುಂಬಾ ಶ್ರಮಪಡುತ್ತಿದ್ದರು.

ಮೇಷ್ಟರು ಪ್ರಾಣೇಶನ ವಿಷಯ, ಗೋದೂಬಾಯಿಯ ಸತ್ಯಾಗ್ರಹ, ಮಾಧವಾಚಾರಿಯ ದುರಂತ, ವೆಂಕೋಬಾಚಾರಿಯ ಹಿಡಿಯಲಾರದ ಸೊಕ್ಕು ಮತ್ತು ದೌರ್ಜನ್ಯಗಳನ್ನು ಊರಿನ ಮುಖಂಡರೆನಿಸಿದ ನಾಲ್ವರಿಗೆ ಹೇಳಿದರು. ಆ ನಾಲ್ವರು ಮತ್ತೆ ಮಂದಿಗೆ ಹೇಳಿದರು. ವೆಂಕೋಬಾಚಾರಿಯ ಇದ್ದ ಒಬ್ಬ ಮಗನನ್ನು ಮನೆಯಿಂದ ಆಚೆ ತಂದುಹಾಕಿ ಆಚಾರಿಯನ್ನು ಕೆರಳಿಸಬೇಕೆಂದು ಇವರಲ್ಲಿ ಬಹು ಜನರಿಗೆ ಆಸೆ ಇತ್ತು. ಯಾವುದಾದರೂ ಒಂದು ರೀತಿಯಲ್ಲಿ ವೆಂಕೋಬಾಚಾರಿಯ ಸೊಕ್ಕು ಮುರಿಯಬೇಕೆಂದು ಈ ಜನ ಹಗಲುಗನಸುಗಳನ್ನು ಕಾಣುತ್ತಿತ್ತು. ಅಷ್ಟವೆ ಬಡ ಪ್ರಾಣಿ ಶ್ರೀನಿವಾಸಾಚಾರಿಯ ಮಗಳು ರಾಧೆಗಾದ ಗತಿಯು ಅವರ ಪಕ್ಕೆಯಲ್ಲಿ ಕೊರೆಯುತ್ತಿತ್ತು. ಊರಿಗೆ ಊರೇ ಶ್ರೀನಿವಾಸಾಚಾರಿಯ ನೆಂಟರು. ಈ ನೆಂಟಸ್ತನವನ್ನು ಹುಡುಕುತ್ತಾ ಹೋದರೆ ಎಲ್ಲರೂ ಬೀಗದವರೇ. ಎಲ್ಲರೂ ಅನುಬಂಧಿಗಳೇ. ಶ್ರೀನಿವಾಸಾಚಾರಿಗೆ ಆದ ಅನ್ಯಾಯ ತಮಗಾದ ಅನ್ಯಾಯವೆಂದು ಭಾವಿಸಿತು ಈ ಜನ. ಮತ್ತು ಹಿಂದೊಂದು ಬಾರಿ ಪಂಚಾಯ್ತಿ ಹಾಕಿದಾಗ ವೆಂಕೋಬಾಚಾರಿ ಅತ್ಯಂತ ಧೂರ್ತತನದಿಂದ ಇವರನ್ನೆಲ್ಲ ಅಪಮಾನಗೊಳಿಸಿದ್ದ. ಇದಕ್ಕೂ ಹೆಚ್ಚಾಗಿ ನ್ಯಾಯದ ದೃಷ್ಟಿಯಿಂದ ನೋಡಿದರೆ ರಾಧೆಯನ್ನು ಬಿಟ್ಟದ್ದು ಶುದ್ಧಾಂಗ ತಪ್ಪು ಎಂಬುದು ಇವರಿಗೆಲ್ಲ ಮನವರಿಕೆಯಾಯಿತು.

ಅಂದು ಜೋಸಗೆ ೬ ಸಂಜೆ. ಆರೂವರೆ ಏಳಕ್ಕಿರಬಹುದು. ಮೇಷ್ಟರು ಊರಿನ ಜನಾರ್ದನ ಕಚೇರಿ–ಬಸ್‌ಸ್ಟ್ಯಾಂಡ್ ಬಳಿ ಇರುವ ಅರಳಿ ಮರದ ಕಟ್ಟೆಗೆ ಬಂದರು. ಆ ಹೊತ್ತಿಗೆ ಎಷ್ಟೋ ವಾಗೀಸು ಮಾತು ಮುಗಿದಿತ್ತು. ಇನ್ನೂ ಅನೇಕ ವಿಷಯಗಳು ನಡೆಯುತ್ತಲಿದ್ದವು. ಮೇಷ್ಟರು ಮಧ್ಯೆ ಬಾಯಿ ಹಾಕಿ "ಅದೆಲ್ಲಾ ಹಾಳಾಗಲಿ, ಪ್ರಾಣೇಶನ್ನ ಏನಾದರೂ ಒಂದು ಗತಿ ಹಚ್ಚಬೇಕಾಗಿದೆ. ಇಲ್ಲದಿದ್ದರೆ ನೀವೆಲ್ಲಾ ಒಂದು ಸ್ತ್ರೀಹತ್ಯೆಯ ದೋಷ ವಸ್ತು ಕಟ್ಟಿಕೊಳ್ಳಬೇಕಾಗುತ್ತದೆ. ಏನಾದರೂ ಉಪಾಯ ಮಾಡಿ ನಾವೆಲ್ಲ ಸೇರಿ ಈ ಕೆಲಸ ಸಾಧಿಸಬೇಕು''

"ಮೇಷ್ಟರೇ, ನೀವು ಏನು ಹೇಳುತ್ತೀರೋ ಅದಕ್ಕೆ ನಮ್ಮ ಸಮ್ಮತಿ. ಬೇಕಾದ್ದು ಹೇಳಿ ಮಾಡುತ್ತೇವೆ.'' ಪುಡಾರಿಯೊಬ್ಬ ಹೇಳಿದ.

"ಹತ್ತು ಜನರ ಹುಲ್ಲು ಕಡ್ಡಿ ಒಂದು ಹೊರೆ. ಪ್ರಾಣೇಶ ಅಪ್ಪನ ಮನೆಯಿಂದ ಹೊರಬಿದ್ದರೆ ಅವನಪ್ಪ ಏನೂ ಕೊಡದೆ ಮದಿನಾಯಿಯನ್ನು ಆಚೆಗೆ ಕಳುಹಿಸುವಂತೆ ಕಳಿಸುತ್ತಾನೆ. ಪ್ರಾಣೇಶನಿಗೆ ಸಂಸಾರ ಹೂಡಲು ಸಾಕಾಗುವಷ್ಟು ಪಾತ್ರೆ ಪಡಗ, ಇರಲಿಕ್ಕೊಂದು ಮನೆ ಮತ್ತು ಇನ್ನು ಸ್ವಲ್ಪ ಆದಾಯ, ಇಷ್ಟು ಮಾಡಿಕೊಟ್ಟರೆ ಆವನು ಬೇರೆ ಸಂಸಾರ ಹೂಡಲು ಶಕ್ತನಾಗಬಹುದು.''

ಕೂತಿದ್ದ ಜನರಲ್ಲಿ ಒಬ್ಬೊಬ್ಬರೆ ತಾವು ಏನೇನು ಪಾತ್ರೆ ಕೊಡಲು ಸಿದ್ಧರಿರುವರೆಂಬುದನ್ನು ಹೇಳಿದರು. ಒಂದು ಕುಟುಂಬಕ್ಕೆ ಸಾಕಾಗುವಷ್ಟು ಪಾತ್ರೆಗೆ ಅಲ್ಲಿಯೇ ಆಶ್ವಾಸನ ದೊರೆಯಿತು. ಇನ್ನೊಬ್ಬ ಹೇಳಿದ. "ನಮ್ಮ ಮನೆ ಹಿತ್ತಲು ಕಡೆ ದನ ಕಟ್ಟುತ್ತಿದ್ದ ಸೂರೆಕಣದ ಚಪ್ಪರವಿದೆ. ಹೋದ ಸಾಲಿನಲ್ಲಿ ಬಾಯಿರೋಗ ಬಂದು ಇದ್ದ ದನ ಎಲ್ಲಾ ಸತ್ತು ಹೋದುವು. ಅದನ್ನೇ ಬಳಸಿ, ಸ್ವಲ್ಪ ರಿಪೇರಿ ಮಾಡಿಕೊಂಡರೆ ಸುಖಕರವಾಗಿರಬಹುದು. ಅದಕ್ಕೆ ಪ್ರಾಣೇಶ ಯಾವ ಬಾಡಿಗೆಯನ್ನೂ ಕೊಡಬೇಕಾದ್ದಿಲ್ಲ. ಅವನಿಷ್ಟ ಬರುವ ವರ್ಷಗಳವರೆಗೆ ಅವನು ಅಲ್ಲಿರಬಹುದು.''

ಮತ್ತೊಬ್ಬ ಹೇಳಿದ, ''ನಮ್ಮ ಹಿರಿಯರು ಕಟ್ಟಿಸಿದ ವಿಠೋಬನ ದೇವಸ್ಥಾನವಿದೆ. ಅವರ ಪೂಜೆ ಸರಿಯಾಗಿ ಸಾಗುತ್ತಿಲ್ಲ. ಪ್ರಾಣೇಶ ಅದನ್ನು

ಸಾಂಗವಾಗಿ ಮಾಡಿಕೊಂಡು ಹೋಗಲಿ. ನಾನು ತಿಂಗಳಿಗೆ ಮೂರು ರೂಪಾಯಿ ಕೊಡುತ್ತೇನೆ.''

ಇದರಂತೆ ಇನ್ನೊಬ್ಬರು ತಮ್ಮ ಮನೆಯಲ್ಲಿ ಪ್ರೈಮರಿ ಸ್ಕೂಲಿನಲ್ಲಿ ಓದುವ ಇಬ್ಬರು ಮಕ್ಕಳಿದ್ದಾರೆಂದೂ, ಅವಕ್ಕೆ ಪಾಠ ಹೇಳಿಕೊಟ್ಟರೆ ತಾನು ಮೂರು ರೂಪಾಯಿ ಕೊಡುವುದಾಗಿಯೂ ಹೇಳಿದ.

ಮೇಷ್ಟರು ತೃಪ್ತಿಯ ನಗೆ ಸೂಸಿ ಅರಳಿ ಕಟ್ಟೆಯಿಂದ ಮನೆಗೆ ತೆರಳಿದರು.

* * * *

ಎತ್ತಿದವರ ಕೂಸಾಗಿ, ಒಲೆಯ ಹಿಂದಿನ ಬೆಕ್ಕಾಗಿ, ಎಲೆಯ ಮರೆಯ ಕಾಯಾಗಿ, ಎಲ್ಲರಿಗೂ ಬೆಲ್ಲದ ಹೇರಾಗಿ ಪ್ರಾಣೇಶ ಸಂಸಾರ ತೂಗಿಸುತ್ತಿದ್ದಾನೆ. ಊರಿನ ಜನ ಒಲಿದರೂ ಹಾಗೆ, ಮುನಿದರೂ ಹಾಗೆ. ಒಲಿದರೆ ಬೇಕಾದಷ್ಟು ಉಪಕಾರ ಮಾಡುತ್ತಾರೆ. ಮುನಿದರೆ ಒಂದೇ ಬಾರಿಗೆ ಹಳ್ಳಕ್ಕೆ ಎಳೆಯುವ ಮಾರ್ಗಗಳನ್ನು ಹುಡುಕುತ್ತಾರೆ. ಪಟ್ಟಣ ವಾಸಕ್ಕೂ ಹಳ್ಳಿಯ ಜೀವನಕ್ಕೂ ಇಲ್ಲಿಯೇ ಅಂತರವಿರುವುದು. ಪಟ್ಟಣಗಳಲ್ಲಿ ಅವನ ಪಾಡು ಅವನಿಗೆ. ಪಕ್ಕದ ಮನೆಯವನ ಹೆಸರೇ ಗೊತ್ತಿರುವುದಿಲ್ಲ. ಪ್ರತಿಯೊಬ್ಬನೂ ಕೈದಿಯಂತೆ ಅವನು ವಾಸಿಸುವ ಮನೆ ನಂಬರಿನಿಂದ ಗುರ್ತಿಸಲ್ಪಡಬೇಕು. ಪಕ್ಕದ ಮನೆಯಲ್ಲಿ ಯಾರಿಗಾದರೂ ಕಾಯಿಲೆ ಆದದ್ದು, ಹೆಣ ಬಿದ್ದದ್ದು, ಮಗ್ಗುಲು ಮನೆಯವರಿಗೆ ಗೊತ್ತೇ ಇರುವುದಿಲ್ಲ. ಒಂದು ವೇಳೆ ಗೊತ್ತಾದರೂ ಆ ವಿಚಾರದಲ್ಲಿ ಯಾರೂ ಆಸಕ್ತಿ ವಹಿಸುವುದಿಲ್ಲ. ಬಿದ್ದ ಹೆಣವನ್ನು ಎತ್ತಲು ಜಟಕಾ ಸಾಬಿಯೋ, ಚಿಕ್ಕೂರಿನ ಎತ್ತಿನ ಗಾಡಿಯವರೋ ಬರಬೇಕು. ಅವನ ಗುಟ್ಟು ಅವನಿಗೆ, ಅವನ ಕಷ್ಟ, ಕಾರ್ಪಣ್ಯ ಅವನದು. ಹಳ್ಳಿಯಲ್ಲಿ ಹಾಗಲ್ಲ, ಅಲ್ಲಿ ಗುಟ್ಟು ಎಂಬುವೇ ಇಲ್ಲೇ ಇಲ್ಲ. ಕೊನೆ ಮನೆಯಲ್ಲಿ ಕೆಮ್ಮಿದ್ದು ಮೊದಲನೆಯ ಮನೆಗೆ ಕೇಳಿಸುತ್ತದೆ. ಗಂಡ ಹೆಂಡಿರ ಜಗಳ, ತಂದೆ ಮಕ್ಕಳ ವಿರಸ ಇಂಥ ಪುಕ್ಕರುಗಳೆಲ್ಲ ಪಂಚಾಯ್ತಿ ಸಲಹೆಯಿಂದ ತ್ಯಾಪೆ ಹೊಂದಬೇಕು. ಊರಿನವರ ಮಾತನ್ನು ಯಾರಾದರೂ ಉಲ್ಲಂಘಿಸಿದರೆ ಅವರಿಗೇನೋ ದುರಂತ ಕಾದಿದೆಯೆಂದೇ ಹೇಳಬೇಕು.

ಪ್ರಾಣೇಶನ ದುಸ್ಥಿತಿಗಾಗಿ ಜನ ಮಮ್ಮುಲ ಮರುಗಿತು. ಯಾರ ಮನೆಯಲ್ಲಾದರೂ ಏನಾದರೂ ಕಾರ್ಯ, ಕಟ್ಟಳೆ, ಹಬ್ಬ ಹರಿದಿನ ಆದರೆ

ಪ್ರಾಣೇಶನಿಗೆ, ಗೋದೂಬಾಯಿಗೆ ಊಟಕ್ಕೆ ಕರೆ ಬರುತ್ತಿತ್ತು. ದಕ್ಷಿಣೆ, ದಾನಧರ್ಮಗಳು ಹೇರಳವಾಗಿ ಬರುತ್ತಿದ್ದವು. ವೆಂಕೋಬಾಚಾರಿಯ ಪೊಗರು ಮುರಿಯಲು ಈ ಸಂಧಿಯನ್ನು ಜನ ಬಳಸಿಕೊಳ್ಳದೆ ಬಿಡಲಿಲ್ಲ.

ಪ್ರಾಣೇಶ ಮತ್ತು ಗೋದೂಬಾಯಿ ಮನೆ ಬಿಟ್ಟು ಹೊದಾಗ ವೆಂಕೋಬಾಚಾರಿ ತುಟಿ ಎರಡು ಮಾಡಲಿಲ್ಲ. "ಹಿರಿಯರ ಮಾತನ್ನು ಮೀರುವ ಮಗ ಇದ್ದರೇನು ಹೋದರೇನು? ಅವನಿಗಾಗಿ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿದೆ. ಒಂದಲ್ಲದ ಹಾಗೆ ಎರಡು ಮದುವೆಗಳನ್ನು ಮಾಡಿ ಮುಂಡಮೋಚಿಕೊಂಡೆ. ಹೇಳಿಕೊಡುವ ಜನಕ್ಕೇನು, ಬೇಕಾದ್ದು ಹೇಳಿಕೊಡುತ್ತಾರೆ. ಆದರೆ ಕೇಳುವವನ ಕಿವಿ, ಅವನ ಹಿಡಿತದಲ್ಲಿ ಇರಬೇಕು. ತನ್ನ ಅನ್ನ ಹುಟ್ಟಿಸಿಕೊಳ್ಳುವ ಯೋಗ್ಯತೆ ಅವನಿಗಿಲ್ಲ, ತನ್ನ ಕಾಲುಗಳ ಮೇಲೆ ನಿಲ್ಲುವ ಚೈತನ್ಯ ಅವನಿಗಿಲ್ಲ. ಹೇಗೋ ಇಂದಲ್ಲ ನಾಳೆ ಬರುತ್ತಾನೆ ......................ಬರದಿದ್ದರೆ ಹಾಳಾಗಿ ಹೋಗಲಿ, ನನ್ನ ಆಸ್ತಿಯ ಗಂಧಗಾಳಿಯನ್ನು ಅವನಿಗೆ ತೋರಿಸುವುದಿಲ್ಲ. ಎಲ್ಲ ನಾನು ದುಡಿದದ್ದು, ಅಷ್ಟನ್ನೂ ಮಾರಿ ತೂರಿ ಬಿಡುತ್ತೇನೆ. ಅಪುತ್ರಸ್ಯ ಗತಿರ್ನಾಸ್ತಿ ಆಗದ ಹಾಗೆ. ಬ್ರಹ್ಮ ಕಪಾಲಕ್ಕೆ ಹೋಗಿ ನನ್ನೆ ಪಿಂಡವನ್ನು ನಾನೇ ಹಾಕಿಕೊಳ್ಳುತ್ತೇನೆ. ಪ್ರಾಣೇಶನ ಘಟ ಶ್ರಾದ್ಧ ಮಾಡುತ್ತೇನೆ ......................" ವೆಂಕೋಬಾಚಾರಿ ಸ್ವಗತವಾಗಿ ಹೇಳಿಕೊಂಡ.

ವೆಂಕೂಬಾಯಿಯವರು ಮಗ, ಸೊಸೆ ಮನೆ ಬಿಟ್ಟು ಹೊರಡುವ ವಿಷಯ ಕೇಳಿ ಮನೆಯ ಮೂಲೆಯಲ್ಲೊಂದು ಕಡೆ ಚಾಪೆ ಹಾಸಿ ಮಲಗಿದರು. ಪ್ರಾಣೇಶನಿಗೆ ಹೇಳಿಕೊಂಡರು, ಗೋದೂಬಾಯಿಗೆ ಬೇಡಿಕೊಂಡರು. ಮಗ, ಸೊಸೆ, ಇಬ್ಬರೂ ಬಂದು ಅವರಿಗೆ ನಮಸ್ಕರಿಸಿದರು. "ನಾವು ಹೋಗುತ್ತೇವೆ" ಎಂದಿಬ್ಬರೂ ಹೇಳಿದರು. ವೆಂಕೂಬಾಯಿಯವರಿಗೆ ಏನು ಉತ್ತರ ಹೇಳಲೂ ತೋಚಲಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತಿದ್ದರು. "ಎಲ್ಲಾದರೂ ಸುಖವಾಗಿರಿ, ನಿಮ್ಮೊಂದಿಗೆ ಇರುವ ಪುಣ್ಯವನ್ನು ನಾನು ಪಡೆದಿಲ್ಲ" ಎಂದು ಹೇಳಿದವರೆ, ಚಾಪೆಯ ಮೇಲೆ ಸ್ವಸ್ಥವಾಗಿ ಮಲಗಿದರು.

ವೆಂಕೋಬಚಾರಿ ಮೊದಲೇ ಪ್ರಾಣೇಶ ಮತ್ತು ಗೋದೂಬಾಯಿಗೆ ಹೇಳಿದ್ದ, ಉಟ್ಟ ಬಟ್ಟೆಯ ಮೇಲೆ ಹೊರಡಬೇಕು, ಬಟ್ಟೆ ಬರೆ ವಸ್ತ್ರ ಒಡವೆ

ಗಳನ್ನೊಂದನ್ನೂ ಮುಟ್ಟಕೂಡದು. ಗಂಡಹೆಂಡತಿಯರಿಬ್ಬರೂ ಅನಿವಾರ್ಯ ವಾಗಿ ಈ ಕರಾರಿಗೆ ಒಪ್ಪಿದ್ದರು. ತಂದೆ ಕೊಟ್ಟಿದ್ದ ಅನೇಕ ಬೆಳ್ಳಿಯ ಸಾಮಾನು ಗಳು, ಬೆಲೆಯುಳ್ಳ ಸೀರೆಗಳು, ಮದುವೆ ಕಾಲದಲ್ಲಿ ಊರಿನವರು ಕೊಟ್ಟಿದ್ದ ಉಡುಗರೆಯ ಸಾಮಾನುಗಳು, ಎಲ್ಲವೂ ಗೋದೂಬಾಯಿಯ ಪೆಟ್ಟಿಗ ಯಲ್ಲಿದ್ದವು. ಆ ಪೆಟ್ಟಿಗೆಯನ್ನೇ ವೆಂಕೋಬಾಚಾರಿ ಮಂಗಮಾಯಮಾಡಿ ಬಿಟ್ಟಿದ್ದ. ಮನೆ ಮುಂದೆ ಜನ ಷೇರಾಯಿಸಿತ್ತು. ಒಬ್ಬರೂ ಮಾತನಾಡ ಲಿಲ್ಲ, ಶಿಲಾಪ್ರತಿಮೆಗಳಂತೆ ನಿಂತಿದ್ದರ. ವೆಂಕೋಬಾಚಾರಿ ಮನೆಯ ಮುಂದಿನ ಹಜಾರದಲ್ಲಿ ಶಥಸಥ ತಿರುಗುತ್ತಿದ್ದ.

*

## ೮

ಶ್ರೀನಿವಾಸಾಚಾರಿ ಸತ್ತ ಮೇಲೆ ಅವನ ಸಂಸಾರ ದಿಕ್ಕು ದಿವಾಳಿ ಆಯಿತು. ಅಣ್ಣನ ಕುಟುಂಬ ನಿರ್ವಹಣೆಗೆ ತಿಂಗಳಿಗೆ ಐದು ರೂಪಾಯಿ ಕೊಡುತ್ತೇವೆಂದು ಆಶ್ವಾಸನ ಕೊಟ್ಟಿದ್ದ ತಮ್ಮಂದಿರು, ಮೊದಲು ಶೋಕವ ಕಾವಿದ್ದಾಗ ತಪ್ಪದೆ ಹಣ ಕಳಿಸುತ್ತ ಬಂದರು. ಆದರೆ ತಿಂಗಳುಗಳು ಉರುಳಿದಂತೆ ಅವರ ಉತ್ಸಾಹ ಕುಗ್ಗಿತು. ಒಬ್ಬೊಬ್ಬರು ಒಂದೊಂದು ತಿಂಗಳು ತಪ್ಪಿಸುತ್ತಾ ಬಂದರು. ಒಂದೊಂದು ತಿಂಗಳು ಐದು, ಒಂದೊಂದು ತಿಂಗಳು ಪಸ್ತು ರೂಪಾಯಿ ಬರತೊಡಗಿದವು. ವರ್ಷ ತುಂಬುವ ಹೊತ್ತಿಗೆ ತಮ್ಮಂದಿರು ಹಣ ಕಳಿಸುವುದನ್ನು ಸಂಪೂರ್ಣವಾಗಿ ನಿಲ್ಲಿಸಿದರು. ಕಾಗದಗಳನ್ನು ಬರೆದರೆ ಅವಕ್ಕೆ ಉತ್ತರವನ್ನೇ ಕೊಡುತ್ತಿರಲಿಲ್ಲ. ರಮಾಬಾಯಿ ಮತ್ತು ಸೀತಾಬಾಯಿಯವರ ಸಾಹಸದಿಂದಾಗಿ ಸಂಸಾರ ಶಕಟವು ಹಾಗೂ ಹೀಗೂ ಸಾಗುತ್ತಿತ್ತು.

ನಾಲ್ಕು ವರ್ಷಗಳು ಕಳೆದಿವೆ. ಹಿರಿಯ ಹುಡುಗ ಕೈ ನೆರವಿಗೆ ಬಂದಿದ್ದಾನೆ. ತನ್ನ ತಂದೆಯ ಶಾನುಭೋಗತನ ತೆಗೆದುಕೊಂಡಿದ್ದಾನೆ. ಅವನೀಗ ಮನೆಯ ಯಜಮಾನ. ಮನೆಯ ಕಾರುಭಾರವನ್ನೆಲ್ಲ ಅವನೇ ತೂಗಿಸಿಕೊಂಡು ಹೋಗುತ್ತಿದ್ದಾನೆ. ಮನೆಮಂದಿಗೆಲ್ಲ ತಮ್ಮ ಬಡತನದ ಅರಿವಿದೆ. ಹೇಗೆಂದರೆ ಹಾಗೆ ಹೊಂದಿಕೊಂಡು ಹೋಗುತ್ತಿದ್ದಾರೆ. ಪ್ರಾಣ ಹಿಡಿದರೆ ಸಾಕು, ಯಾವ ದುರ್ವ್ಯಸನಕ್ಕೆ ಹೋಗುವುದು ಬೇಡ. ದೇವರು ನಡೆಸಿದಂತೆ ನಡೆದರೆ ಆಯಿತು — ಇದು ಅವರ ಗಾಯತ್ರಿ.

ಶ್ರೀನಿವಾಸಾಚಾರಿಯ ಸ್ಥಿರ ಚರಾಸ್ತಿಗಳೆಲ್ಲ ಅವನ ಸಾಲಗಾರರ ಪಾಲಾದವು. ಮನೆಮಂದಿಯನ್ನಷ್ಟು ಬಿಟ್ಟು ಉಳಿದುದೆಲ್ಲವನ್ನೂ ದೋಚಿಕೊಂಡು ಹೋದರು. ಸಾಲಗಳು ಸಹ ಪಾಯಿಸೆ ತೀರಿ ಹಾಗೆಯೇ ಮುಳುಗಿಹೋದವು. ಹಚ್ಚ ಹೊಸ ಅಧ್ಯಾಯವನ್ನು ಶ್ರೀನಿವಾಸಾಚಾರಿಯ ಮಗ ಆರಂಭಿಸಿದ. ಬಿದ್ದ ಮನೆತನ, ತಮ್ಮಿಂದ ಆದಷ್ಟು ಉಪಕಾರ ಮಾಡಬೇಕು. ಇದು ಊರಿನವರ ಮನೋವೃತ್ತಿ. ಇದರಿಂದಾಗಿ ಆಗಾಗ್ಗೆ

ಕಾಳುಕಡ್ಡಿಗಳು, ಹುಣಿಸೆಹಣ್ಣು, ಮೆಣಸಿನಕಾಯಿ ಮುಂತಾದವುಗಳು ಮನೆಗೆ ಬರುತ್ತಿದ್ದವು. ನೆಲಕ್ಕೆ ಬಿದ್ದ ಕುಟುಂಬ ಕುಂಟುತ್ತ ಸಾಗಿತು.

ಬಡತನಕ್ಕೆ ಹೊಂದಿಕೊಂಡ ಹಾಗೆ ನಮ್ಮ ಜನ ಸಿರಿತನಕ್ಕೆ ಹೊಂದಿಕೊಳ್ಳುವುದಿಲ್ಲ. ಹಣ ಬಂದಂತೆ, ತಮ್ಮ ನಿತ್ಯಜೀವನದ ವೆಚ್ಚವನ್ನೂ ಏರಿಸುತ್ತ ಹೋಗುತ್ತಾರೆ. ಆಲಸ್ಯ, ವಿಲಾಸ, ವಿಹಾರ ಮುಂತಾದವು ಮನೆಮಾಡುತ್ತವೆ. ಹಣ ಎಲ್ಲ ಕಳೆದುಕೊಂಡು ಸಾಲಗಾರರ ವಶಕ್ಕೊಳಗಾಗುವವರೆಗೆ ಅವರ ಮನಸ್ಸಿಗೆ ಸಮಾಧಾನವೇ ಇರುವುದಿಲ್ಲ.

ಆದರೆ ಅವರಿಗೆ ರೂಢಿಯಾಗಿರುವ ಬಡತನಕ್ಕೆ ಅವರು ಬಹಳ ಚೆನ್ನಾಗಿ ಹೊಂದಿಕೊಳ್ಳುತ್ತಾರೆ. ಒಂದೇ ಒಂದು ಪಾವು ಅಕ್ಕಿಯಿಂದ ಒಬ್ಬ ದಾಸಯ್ಯ ತನ್ನ ಸಂಸಾರ ಸಾಗಿಸುತ್ತಿದ್ದ. ಈ ಸಂಸಾರದಲ್ಲಿ ದಾಸಯ್ಯ, ಅವನ ಹೆಂಡತಿ, ಅವನ ಮಗು ಮತ್ತು ಒಂದು ನಾಯಿ ಇದ್ದವು. ಇಷ್ಟು ಪ್ರಾಣಿಗಳ ಪೋಷಣೆ ಒಂದು ಪಾವು ಅಕ್ಕಿಯಿಂದ ಹೇಗಾಗುತ್ತಿತ್ತೆಂಬುದು ಅತ್ಯಂತ ಸ್ವಾರಸ್ಯವಾಗಿದೆ.

ಅಕ್ಕಿಯನ್ನು ಬೇಯಿಸುತ್ತಿದ್ದರು. ಬೇಯಿಸುವಾಗ ಬರುತ್ತಿದ್ದ ಗಂಜಿಯನ್ನು ದಾಸಯ್ಯನ ಹೆಂಡತಿ ಒಂದು ಚಿಟಿಕೆ ಉಪ್ಪು ಹಾಕಿ ಕುಡಿಯುತ್ತಿದ್ದಳು. ಅನ್ನವನ್ನು ದಾಸಯ್ಯ ತಿನ್ನುತ್ತಿದ್ದ. ತಾಯಿಯ ಹಾಲನ್ನು ಮಗು ಕುಡಿಯುತ್ತಿತ್ತು. ಮಗುವಿನ...... ......ಗೆಯನ್ನು ನಾಯಿ ತಿನ್ನುತ್ತಿತ್ತು.

ರಾಧೆಯ ಎಲ್ಲ ಆಸೆಗಳು ಬರಿದಾದವು. ಇದು ಗಂಡಸರ ಮತ್ತು ಹಣವಿದ್ದವರ ಪ್ರಪಂಚ. ತನ್ನಂಥ ಕಡು ಬಡವೆಯಾದ ಹೆಣ್ಣಿಗೆ ಈ ಸಮಾಜದಲ್ಲಿ ಸ್ಥಾನವಿಲ್ಲೆಂದು ಆಕೆ ತಿಳಿದಳು. ಮನೆಯಲ್ಲಿ ಅವಳೇ ಒಬ್ಬ ದುಡಿಯುವ ಗಂಡಸು. ಮನೆಗೆಲಸವೆಲ್ಲಾ ಅವಳ ಮೇಲೆ. ತಾಯಿ ಮತ್ತು ಅಜ್ಜಿಯರಿಬ್ಬರೂ ಬಕಾಸುರನ ಹೊಟ್ಟೆಯಂಥ ಸಂಸಾರಕ್ಕೆ ಒದಗಿಸಲು ಹೊರಗೆ ಹೋಗಿ ಅಲೆದು, ತಿರಿದು ತರಬೇಕಾಗಿತ್ತು. ಮನೆಯಲ್ಲಿ ಎಲ್ಲರಿಗೂ ಕೆಲಸ, ಯಾರಿಗೂ ಬಿಡುವಿಲ್ಲ. ಅವರವರ ಪಾಲಿನ ಕೆಲಸವನ್ನು ಅವರವರು ಮಾಡಲೇಬೇಕಾಗಿತ್ತು.

ಶಾಲೆಗೆ ಹೋಗುವ ಮೂರು ಹುಡುಗರು. ಇವರಲ್ಲಿ ಇಬ್ಬರು ಗಂಡು ಹುಡುಗರು, ಕೊನೆಯದೊಂದು ಹೆಣ್ಣು. ಅವು ಶಾಲೆಯಲ್ಲಿ ವಿದ್ಯೆ ಕಲಿಯು

ವುದಕ್ಕೆ ಹೋಗುತ್ತವೆನ್ನುವುದಕ್ಕಿಂತ ಮನೆಯಲ್ಲಿ ವಿಪರೀತ ಗಲಾಟೆ ಮಾಡುತ್ತವೆಂದು ಅವನ್ನು ಶಾಲೆಗೆ ಕಳಿಸುತ್ತಿದ್ದರು.

ಒಂದು ದಿನಕ್ಕೂ ಮತ್ತೊಂದು ದಿನಕ್ಕೂ ವ್ಯತ್ಯಾಸವಿಲ್ಲ. ಈ ಸಂಸಾರಕ್ಕೆ ಹಬ್ಬ ಹುಣ್ಣಿಮೆಗಳಿಲ್ಲ. ಆ ಮಧ್ಯಾಹ್ನಕ್ಕೆ ಏನು ದೊರೆಯಿತೋ ಅದನ್ನು ತಿನ್ನಬೇಕು. ಒಂದು ವೇಳೆ ಸಿಕ್ಕದಿದ್ದರೆ, ಸಿಗುವವರೆಗೂ ಉಪವಾಸ ಇರಬೇಕು.

ರಾಧೆಯನ್ನು ನ್ಯಾಮತಿಯಿಂದ ಕರೆತರಲು ಮೇಷ್ಟರು ಹೊನ್ನಾಳಿಯಿಂದ ಹೊರಡುವ ಹಿಂದಿನ ದಿನ ಬಸ್ ಸ್ಟ್ಯಾಂಡ್ ಅರಳೀಕಟ್ಟೆಯ ಸಭೆಯಲ್ಲಿ ರಾಧೆಯನ್ನು ಕರೆತರುವ ಸಮಾಚಾರ ಎತ್ತಿದ್ದರು. ಅವಳ ನಿಷೇಕ ಆಗದೆ ಅವಳನ್ನು ಕರೆತರುವ ಹಾಗಿರಲಿಲ್ಲ. ನಿಷೇಕವನ್ನು ಕೇವಲ ಒಂದು ಹಬ್ಬದಂತೆ, ಯಾವ ಹೆಚ್ಚಿನ ಆಡಂಬರಗಳಿಲ್ಲದೆ ಮುಗಿಸಬೇಕೆಂದು ನಿಶ್ಚಿತವಾಯಿತು. ಆದರೂ ಅತ್ಯಾವಶ್ಯ ಬೇಕಾದ ಖರ್ಚುವೆಚ್ಚಗಳಿಗೆ ಹೊಸದಾಗಿ ಪಟ್ಟಿ ಹಾಕಲಾಯಿತು. ಪ್ರಾಣೇಶನೂ ಐವತ್ತು ರೂಪಾಯಿಗಳನ್ನು ಕೊಡಲು ಒಪ್ಪಿದ್ದನು. ರಾಧೆಗೆ ಉಡಲು ಸರಿಯಾದ (ಹರಿಯದೆ ಇದ್ದ) ಸೀರೆ ಇದೆಯೋ ಇಲ್ಲವೋ ಎಂಬ ಅನುಮಾನ ಇದ್ದುದರಿಂದ, ಹತ್ತು ರೂಪಾಯಿ ಮೌಲ್ಯದ ಒಂದು ಸೀರೆಯನ್ನು ಮೇಷ್ಟರು ತೆಗೆದುಕೊಂಡು ಹೋಗಬೇಕೆಂದೂ ನಿಶ್ಚಿತವಾಯಿತು. ಮುಂದಿನ ಸೋಮವಾರ ನಿಷೇಕದ ಮುಹೂರ್ತ ಇಡಲಾಗಿತ್ತು.

ಈಗ ಪ್ರಾಣೇಶನ ಸ್ಥಿತಿ ಸ್ವಲ್ಪ ಸುಧಾರಿಸಿದೆ-ಹೆಚ್ಚು ಹೇಳಿಕೊಳ್ಳುವಷ್ಟಲ್ಲ-ಸಂಸಾರ ಶಕಟ ಸುಸೂತ್ರವಾಗಿ ಉರುಳುವಷ್ಟು ಸುಧಾರಿಸಿದೆ. ಎಲ್ಲ ಉಪಾಧ್ಯಾಯರುಗಳಿಗೆ ಸಿಕ್ಕ ಹೊಸ ಸ್ಕೇಲು ಅವನಿಗೂ ಸಿಕ್ಕಿದೆ. ವೈದಿಕವೃತ್ತಿ, ಪೂಜೆ, ಇತ್ಯಾದಿಗಳಿಂದಲೂ ಅಲ್ಪಸ್ವಲ್ಪ ಹಣ ಬರುತ್ತಿದೆ. ತಿಂಗಳಿಗೆ ಮೂರು ರೂಪಾಯಿನ ಪುಟ್ಟದೊಂದು ಮನೆ ಹಿಡಿದಿದ್ದಾನೆ. ಅವನು ತಂದೆಯ ಮನೆ ಬಿಟ್ಟು ಬಂದು ಈಗ ಎಂಟು ತಿಂಗಳುಗಳಾಗಿವೆ.

ಸಿರಿವಂತಿಕೆಯಲ್ಲಿ ಬೆಳೆದ ಗೋದೂಬಾಯಿ ಹೊಸ ವಾತಾವರಣಕ್ಕೆ, ಕಷ್ಟಕಾರ್ಪಣ್ಯದ ಜೀವನಕ್ಕೆ ಹೊಂದಿಕೊಳ್ಳಲು ತುಂಬಾ ಶ್ರಮಿಸಬೇಕಾ

ಯಿತು. ಮನೆಯ ಎಲ್ಲ ಕೆಲಸಗಳನ್ನೂ ಆಕೆಯೇ ಚಾಚೂ ತಪ್ಪದೆ ಮಾಡ ಬೇಕಾಗಿತ್ತು. ಮೊದಲು, ಅತ್ತೆಯ ಮನೆಗೆ ಬಂದಿದ್ದಾಗ, ಅತ್ತೆ ವೆಂಕೂ ಬಾಯಿಯವರೇ ಅಡಿಗೆ, ನೀರು, ಮುಂತಾದ ಎಲ್ಲ ದೊಡ್ಡ ಕೆಲಸಗಳನ್ನೂ ಮಾಡಿಕೊಂಡು ಹೋಗುತ್ತಿದ್ದರು. ಮೇಲುಗೆಲಸಗಳನ್ನು ಈಕೆ ಮಾಡಿದರೆ ತೀರಿತು.

ಪ್ರಾಣೇಶ ಹೊಸ ಮನೆ (ಮೂರು ರೂಪಾಯಿನ ಬಾಡಿಗೆ ಮನೆ) ಮಾಡಿ ಎರಡು ತಿಂಗಳಾಗಿವೆ. ಅವನ ಸ್ಥಿತಿ ಕೊಂಚ ಸುಧಾರಿಸಿದ ಕೂಡಲೇ ರಾಧೆಯನ್ನು ಕರೆತರುವ ವ್ಯವಸ್ಥೆ ಮಾಡುವುದಾಗಿ ಗೋದೂಬಾಯಿಗೆ ಮೇಷ್ಟರು ಆಶ್ವಾಸನ ಕೊಟ್ಟಿದ್ದರು.

ದೇಸಾಯಿಯವರಿಗೆ ಗೋದೂಬಾಯಿಯೇ ನಡೆದ ವಿದ್ಯಮಾನವನ್ನೆಲ್ಲಾ ವಿವರವಾಗಿ ಬರೆದಿದ್ದಳು. ಮೇಷ್ಟರು ಕೈಕೊಂಡ ಪಾತ್ರ, ಅವರ ಸಹಾಯ ವನ್ನು ಮುಕ್ತಕಂಠದಿಂದ ಹೊಗಳಿದ್ದಳು. ದೇಸಾಯಿಯವರು ಗೋದೂ ಬಾಯಿ ಒಂದು ಬಾರಿ ಬಿದರಹಳ್ಳಿಗೆ ಬರಬೇಕೆಂದು ಬರೆದಿದ್ದರು. ರಾಧೆ ಮನೆಗೆ ಬಂದ ಮೇಲೆ ಒಂದು ಬಾರಿ ಹೋಗುವದಾಗಿ ಬರೆದಿದ್ದಳು.

"ಪ್ರಾಣೇಶ'' ನಾಟಕದಲ್ಲಿ ನೇರವಾದ ಪಾತ್ರ ತೆಗೆದುಕೊಳ್ಳದೆ ಇದ್ದ ಊರ ಜನಕ್ಕೆ ಇದೊಂದು ಕುತೂಹಲ ಪ್ರಸಂಗವಾಗಿತ್ತು. ಸವತಿ ಸಾಯಲೆಂದು ಹೆಣ್ಣು ಬಯಸುವುದು ಅತಿ ಸಾಮಾನ್ಯ. ಆದರೆ ಕಾಡಿಗೆ ಹೋದ ಮಾರಿಯನ್ನು ಮನೆಗೆ ಕರೆತರುವ ಈ ವಿಚಿತ್ರ ಹೆಣ್ಣಿನ ರೀತಿಯನ್ನು ನೋಡಿ ಅವರೆಲ್ಲರಿಗೂ ಆಶ್ಚರ್ಯವಾಯಿತು.

''ಇವೊತ್ತೇನೊ ತನ್ನ ಮಕ್ಕಳು ಸತ್ತವೆಂದು ಸವತಿಯನ್ನು ಕರಕೊಂಡು ಬರಬೇಕೆಂದು ಹಟ ಹಿಡಿದಿದ್ದಾಳೆ. ನಾಳೆ ಅವಳು ಮನೆಗೆ ಬಂದರೆ ಪೊರಕೆ ಕಾಳಗ ಆರಂಭವಾಗುತ್ತದೆ" ಎಂದು ಭವಿಷ್ಯ ನುಡಿದರು ಅನೇಕ ಜನ.

. . . .

ಪ್ರಾಣೇಶ ಮನೆ ಬಿಟ್ಟು ಹೋದಂದಿನಿಂದ ಹಾಸಿಗೆ ಹಿಡಿದ ವೆಂಕೂ ಬಾಯಿಯವರು ಮೇಲೇಳಲೇ ಇಲ್ಲ. ಹೆಂಡತಿಗೆ ಏನೋ ಕಾಯಿಲೆ ಆಗಿರ

ಬೇಕೆಂದು ವೆಂಕೋಬಾಚಾರಿ ಅವಾಚ್ಯ ಶಬ್ದಗಳಿಂದ ಬೈದ. ಹೆಂಡತಿ ಬೈಗಳದ ಔಷಧಿಗೆ ಮೇಲೇಳದಿದ್ದುದರಿಂದ ಕುಪಿತನಾದ. ಆಮೇಲೆ ತನಗೆ ತಿಳಿದ ಅಗ್ಗದ ಔಷಧಿಗಳನ್ನು ಅರೆದು ಹುಯ್ದ. ವೆಂಕೂಬಾಯಿಯವರಿಗೆ ಮನೋರೋಗ ಅಂಟಿದೆಯೆಂಬುದನ್ನು ಅವನ ಮೊಂಡ ಮನಸ್ಸು ಅರಿಯದಾಯಿತು. ಆದರೂ ಆಕೆ ಒಂದು ತಡವೆಯಾದರೂ ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಲಿಲ್ಲ. ದಿನದಿನಕ್ಕೆ ಗಂಧದ ಕೊರಡಿನಂತೆ ಸವೆಯುತ್ತ ಬಂದರು. ನೀರು ಹೊರುವುದು, ಅಡಿಗೆ ಮಾಡುವುದು ಮುಂತಾದ ಮನೆಗೆಲಸಗಳೆಲ್ಲಾ ಆಚಾರಿಯ ಮೈಮೇಲೆ ಕುಸಿದು ಬಿತ್ತು. ಅದರಿಂದ ತಪ್ಪಿಸಿಕೊಳ್ಳಲು ಎಷ್ಟು ಔತನಗಳು ಬಂದರೂ ಅವಕ್ಕೆಲ್ಲಾ ಒಪ್ಪಿಕೊಳ್ಳುತ್ತಿದ್ದ.

ವೆಂಕೋಬಾಚಾರಿಯ ಮೇಲೆ ಊರಿನ ಜನಕ್ಕೆ ಕೋಪವಿತ್ತೇ ವಿನಾ ವೆಂಕೂಬಾಯಿಯವರ ಮೇಲಿರಲಿಲ್ಲ. ಆಚಾರಿ ಇಲ್ಲದ ಸಮಯ ಸಾಧಿಸಿ ಅವರು ಅವನ ಮನೆಗೆ ಬಂದು ವೆಂಕೂಬಾಯಿಯವರ ಯೋಗಕ್ಷೇಮವನ್ನು ವಿಚಾರಿಸಿಕೊಂಡು ಹೋಗುತ್ತಿದ್ದರು. ವೆಂಕೂಬಾಯಿಯವರ ಕಾಯಿಲೆ ಏನೆಂಬುದು ಅವರಿಗೆ ಚೆನ್ನಾಗಿ ಗೊತ್ತು. ಆದರೆ ಅದನ್ನು ಬಹಿರಂಗವಾಗಿ ಹೇಳುವ ದಾಷ್ಟೀಕ ಯಾರಿಗೂ ಇರಲಿಲ್ಲ. ಅದರಲ್ಲಿಯೂ ಸಾಹಸಿಗಳಾದ ಒಬ್ಬಿಬ್ಬರು ಮುದುಕಿಯರು ಆಚಾರಿಗೆ ಹೇಳಿದರು. "ಅನ್ಯಾಯವಾಗಿ ಆ ಪ್ರಾಣಿಯನ್ನು ಕೊಲ್ಲುತ್ತಿದ್ದೀರ, ಆಚಾರ್ರೇ, ಆಕೆಗೆ ಕಾಯಿಲೆ ಏನೂ ಇಲ್ಲ. ಮಗ, ಸೊಸೆ ಮನೆ ಬಿಟ್ಟು ಹೋದ ಮನೋರೋಗ ಆಕೆಯನ್ನು ತಿನ್ನುತ್ತಾ ಇದೆ. ಅವರಿಬ್ಬರನ್ನು ನೀವು ಕರೆದುಕೊಂಡು ಬರದೆ ಇದ್ದರೆ ಖಂಡಿತವಾಗಿಯೂ ವೆಂಕೂಬಾಯಿಯನ್ನು ಕಳೆದುಕೊಳ್ಳುತ್ತೀರಿ."

ಬಾಲ ತುಳಿದ ಘಟಸರ್ಪದಂತೆ ಆಚಾರಿ ಸಿಡಿದೆದ್ದ. "ಎಲ್ಲರೂ ನನಗೆ ಬುದ್ಧಿ ಹೇಳುವುದಕ್ಕೆ ಬರುವವರೇ. ಏನೋ ಜ್ವರ ಬಂದು ಎರಡು ದಿನ ಮಲಗಿದ್ದಾಳೆ. ಅದಕ್ಕೆ ಇಷ್ಟುದ್ದ ಕಥೆ ಕಟ್ಟಿದ್ದೀರ. ಅವಳಿಗೇನು ಧಾಡಿಯೂ ಆಗಿಲ್ಲ. ಇನ್ನೆರಡು ದಿನಗಳಲ್ಲಿ ಕಲ್ಲುಗುಂಡಿನ ಹಾಗೆ ಕೂಡುತ್ತಾಳೆ.'' ಬಂದ ಜನರನ್ನು ಆಚಾರಿ ಗದ್ದರಿಸಿ ಅಟ್ಟಿಹಾಕಿದ.

ಅತ್ತೆ ನೆಲ ಹಿಡಿದ ವಿಷಯ ಗೋದೂಬಾಯಿಯ ಕಿವಿಗೂ ಮುಟ್ಟಿತು.

ತನ್ನ ತಾಯಿಯನ್ನೇ ಕರೆಯಿಸಿದ ಅತ್ತೆಗೆ ಕಾಯಿಲೆ ಆಗಿರುವ ವಿಚಾರ ಕೇಳಿ ಅವಳ ಮನಸ್ಸು ಬಹಳವಾಗಿ ನೊಂದುಕೊಂಡಿತು. ತನ್ನ ಗಂಡ ಮನೆ ಬಿಡಲು ತನ್ನ ಹಟವೇ ಕಾರಣವಲ್ಲವೇ? ತಾನೇ ಸುಮ್ಮನಿದ್ದಿದ್ದರೆ ತನ್ನ ಗಂಡ ಮನೆ ಬಿಟ್ಟು ಬಂದು ಬೇರೆ ಸಂಸಾರ ಹೂಡುವ ಹವ್ಯಾಸಕ್ಕೆ ಹೋಗುತ್ತಿರಲಿಲ್ಲ. ಅವರು ಮನೆ ಬಿಟ್ಟು ಬಂದಿದ್ದರಿಂದ ಅತ್ತೆಯವರು ಮೃತ್ಯುಶಯ್ಯೆಯಲ್ಲಿ ಮಲಗಿದ್ದಾರೆ–ಎಂದು ಗೋದೂಬಾಯಿ ತರ್ಕ ಮಾಡಿದಳು. ಇನ್ನು ಮತ್ತೆ ಮಾವನ ಮನೆ ಮೆಟ್ಟಲು ಹತ್ತುವಹಾಗಿಲ್ಲ. ಕೈಮಿಂಚಿಹೋಗಿದೆ. ರಾಧೆ ಇನ್ನು ಎರಡು ಮೂರು ದಿನಗಳಲ್ಲಿ ಬರುವವಳಿದ್ದಾಳೆ. ಹೀಗೆ ಆಲೋಚನೆ ಮಾಡುತ್ತ ಗಂಡನ ಹಾದಿ ಕಾಯುತ್ತಾ ಕುಳಿತಳು.

ಪ್ರಾಣೇಶ ದಿನಕ್ಕಿಂತ ಅಂದು ಮನೆಗೆ ತಡವಾಗಿಯೇ ಬಂದ. ಮಾರನೆಯ ದಿನ ಸ್ಕೂಲು ಇನ್‌ಸ್ಪೆಕ್ಟರು ಬರುವವರಿದ್ದರಾದ್ದರಿಂದ ಶಾಲೆಗೆ ಸುಣ್ಣ ಬಣ್ಣ ಕಾಣಿಸಬೇಕಾಗಿತ್ತೆಂದೂ, ಅದರ ಮೇಲ್ವಿಚಾರಣೆಯನ್ನು ತಾನು ನೋಡಿಕೊಳ್ಳಬೇಕಾಗಿತ್ತೆಂದು ತಿಳಿಸಿದ.

"ಅತ್ತೆಯವರಿಗೆ ತುಂಬಾ ಕಾಯಿಲೆಯಂತೆ"

''ಹೌದು ನನಗೂ ವರ್ತಮಾನ ಬಂತು''

"ಅವರು ಬದುಕುವ ಲಕ್ಷಣ ಕಾಣುವದಿಲ್ಲವಂತೆ"

"........................"

"ಹೇಗಾದರೂ ಮಾಡಿ ಅವರನ್ನು ನೋಡಿಕೊಂಡು ಬರಬೇಕು"

''ಅದು ಸಾಧ್ಯವಿಲ್ಲ''

"ಏಕೆ?''

"ಅಪ್ಪ ಕಾಲು ಮುರಿದು ಕೈಗೆ ಕೊಡುತ್ತಾನೆ."

''ಅವರಿಗೆ ಗೊತ್ತಾಗದಂತೆ ಹೋದರೆ''

''ಅಷ್ಟು ಶಕ್ತಿ, ಸಾಹಸ ನನ್ನಲ್ಲಿಲ್ಲ''

ಪ್ರಾಣೇಶನಿಂದ ಈ ಉತ್ತರ ಬಂದಿದ್ದನ್ನು ಕೇಳಿ ಗೋದೂಬಾಯಿಗೆ ಸ್ವಲ್ಪವೂ ಆಶ್ಚರ್ಯವಾಗಲಿಲ್ಲ. ಅಪ್ಪನ ಬೆದರಿಕೆಗೆ ಹೆಂಡತಿಯನ್ನೇ ಬಲಿಕೊಡಲು ಸಿದ್ಧನಾಗಿದ್ದವನು ಈ ಸಾಹಸವನ್ನು ಎಂದಿಗೂ ಮಾಡನೆಂದು

ಆಕೆಗೆ ಗೊತ್ತಿತ್ತು. ಪ್ರಾಣೇಶನನ್ನು ಈ ವಿಚಾರದಲ್ಲಿ ಒತ್ತಾಯ ಮಾಡಿ ಪ್ರಯೋಜನವಿಲ್ಲೆಂದು ಆಕೆಗೆ ಮನವರಿಕೆಯಾಯಿತು. ತಾನೇ ಹೋಗಿ ಸಾಯುವ ಅತ್ತೆಯನ್ನು ಒಂದು ಬಾರಿ ನೋಡಿಕೊಂಡು ಬಂದರೆ ಹೇಗೆ? ತಾನು ಮಾವನ ಕಣ್ಣಿಗೆ ಬಿದ್ದರೆ ಸಿಗಿದು ತೋರಣ ಕಟ್ಟುತ್ತಾನೆ............ ಏನೇ ಆಗಲಿ ಅತ್ತೆಯನ್ನು ನೋಡಲೇ ಬೇಕು.

ವೆಂಕೂಬಾಯಿಯವರು ಕಾಯಿಲೆ ಮಲಗಿದ್ದರಿಂದ ವೆಂಕೋಬಾಚಾರಿಯ ಕೈಕಾಲುಗಳನ್ನು ಕಟ್ಟಿಹಾಕಿ ಮೂಲೆಯಲ್ಲಿ ಕೂಡಿಸಿದಂತಾಯಿತು. ಮನೆ ಗೆಲಸಗಳನ್ನೆಲ್ಲಾ ಅವನೇ ಮಾಡಬೇಕಾಯಿತು. ಹಳ್ಳಿಗಳ ಮೇಲೆ ಹೋಗಿ ಮದುವೆ ಮುಂತಾದವುಗಳಿಗೆ ಅವನು ಹೋಗುವುದು ತಪ್ಪಿಹೋಯಿತು. ಬರುತ್ತಿದ್ದ ವರಮಾನಕ್ಕೆ ಕಲ್ಲು ಬಿತ್ತೆಂದು ಆಚಾರಿಗೆ ಒಂದು ಕಡೆ ಸಂಕಟ. ಅವನು ಮೂರು ಹೊತ್ತೂ ಮನೆಯಲ್ಲೇ ಇರುತ್ತಿದ್ದುದರಿಂದ ತನ್ನ ಕೋಪ ತಾಪಗಳನ್ನೆಲ್ಲ ವೆಂಕೂಬಾಯಿಯವರಿಗೆ ಹೊಟ್ಟೆ ತುಂಬ ಬೈಯ್ದು ತೀರಿಸಿ ಕೊಳ್ಳುತ್ತಿದ್ದ.

ಆಚಾರಿ ಸ್ನಾನ ಮಾಡಲು ನದಿಗೆ ಹೋಗಿದ್ದಾಗ, ಸಾಮಾನು ಸರಂ ಜಾಮು ತರಲು ಪೇಟೆಗೆ ಹೋದ ಸಮಯವನ್ನು ಸಾಧಿಸಿ, ವೆಂಕೂಬಾಯಿಯ ಪರಿಚಯಸ್ತರು ಅವರ ಮನೆಗೆ ಹೋಗಿ ಆಕೆಯ ಆರೋಗ್ಯ ವಿಚಾರಿಸಿಕೊಳ್ಳು ತ್ತಿದ್ದರು ಮತ್ತು ಆಕೆಯ ಬೇಸರ ಹೋಗುವಂತೆ ಲೋಕಾಭಿರಾಮವಾಗಿ ನಾಲ್ಕು ಮಾತುಗಳನ್ನಾಡಿ ಬರುತ್ತಿದ್ದರು. ರಾಧೆಯನ್ನು ಮನೆಗೆ ಕರೆತರುವ ವಿಚಾರವನ್ನು ಸಹ ತಿಳಿಸಿದ್ದರು.

ತನ್ನ ಅತ್ತೆಯನ್ನು ನೋಡಬೇಕೆಂಬ ಹಂಬಲ ಗೋದೂಬಾಯಿಗೆ ತುಂಬಾ ಹೆಚ್ಚಾಯಿತು. ನನ್ನ ಮಾವ ಎಂದು ಹಳ್ಳಿಗೆ ಹೋಗುತ್ತಾನೆ, ಯಾವಾಗ ಹೋಗುತ್ತಾನೆ, ಬರುವುದು ಯಾವಾಗ ಮುಂತಾದ ವಿಚಾರಗ ಳನ್ನು ವಿಚಾರಿಸುತ್ತಿದ್ದಳು. ಮೂರು ನಾಲ್ಕು ದಿನಗಳಾದರೂ ಆಚಾರಿ ಮನೆ ಬಿಟ್ಟು ಹೊರಡಲೇ ಇಲ್ಲ. ಐದನೆಯ ದಿನ ಬೆನಕನಹಳ್ಳಿಗೆ ಮಧ್ಯಾಹ್ನ ಹೋದನೆಂದು ಗೋದೂಬಾಯಿಗೆ ಪಕ್ಕದ ಮನೆ ರೇಣೂಬಾಯಿಯವರು ತಿಳಿಸಿದರು. ಮಾವ ಇಲ್ಲದ ವೇಳೆಯಲ್ಲಿ ತಾನು ಮನೆಗೆ ಹೋದ ವಿಚಾರ

ವನ್ನು ಯಾರಾದರು ಅವನಿಗೆ ತಿಳಿಸಿದರೆ ತಾನು ಬೈಸಿಕೊಳ್ಳುವುದಲ್ಲದೆ ಅತ್ತೆಯನ್ನು ಅವನ ಕಿರುಕುಳಕ್ಕೆ ಈಡುಮಾಡಬೇಕಲ್ಲಾ ಎಂಬ ಚಿಂತೆ ಸಹ ಅವಳನ್ನು ಬಾಧಿಸುತ್ತಿತ್ತು. ಕತ್ತಲಾದ ಮೇಲೆ ಹೋಗುವುದು ಒಳಿತೆಂದೇ ಅವಳು ನಿರ್ಧರಿಸಿದಳು.

ಪಟ್ಟಣಗಳಲ್ಲಿ ಕತ್ತಲನ್ನು ಕಾಣುವುದೇ ಅಪರೂಪ. ಬೆಳದಿಂಗಳು ಬಂದಿದ್ದು ಸಹ ಜನಕ್ಕೆ ತಿಳಿಯುವುದಿಲ್ಲ. ವಿದ್ಯುಲ್ಲತೆಯ ಬೆಳಕು ಪ್ರತಿ ಸೂರ್ಯನಂತಿರುತ್ತದೆ. ಆಕಸ್ಮಾತ್ತಾಗಿ ಹವಾಮಾನದ ಪರಿಸ್ಥಿತಿಗೊಳಪಟ್ಟು ದೀಪಗಳು ಹೋದಾಗ ಕತ್ತಲಿನ ಅನುಭವವಾಗುತ್ತದೆ. ಹಳ್ಳಿಗಳಲ್ಲಿ ಮುನಿಸಿಪಾಲಿಟಿಯ ಮುರುಕು ಲಾಂದ್ರದ ದೀಪಗಳು ತಿಣುಕಾಡಿ ಸ್ವಲ್ಪ ಬೆಳಕು ಬೀರಿದರೂ, ಅದು ಹತ್ತು ಗಜ ದೂರ ಸಹ ದಾಟುವುದಿಲ್ಲ.

ಪ್ರಾಣೇಶ ಪಾಠ ಹೇಳಿಕೊಡಲು ಯಾರದೋ ಮನೆಗೆ ಹೋಗಿದ್ದ. ಗೋದೂಬಾಯಿ ಸುಮಾರು ಎಂಟು ಗಂಟೆ ಸಮಯಕ್ಕೆ ಅತ್ತೆಯನ್ನು ಭೇಟಿ ಮಾಡಿ ಬರಲು ಹೋದಳು. ಮನೆಯ ಹೆಬ್ಬಾಗಿಲು ಹಾಗೆಯೇ ಮುಚ್ಚಿತ್ತು. ನಡುಮನೆಯಲ್ಲೊಂದು ಹಣತೆಯ ದೀಪ ಮಿನುಗುತ್ತಿತ್ತು. ಗೋದೂಬಾಯಿ ಮೆಲ್ಲಗೆ ಬಾಗಿಲನ್ನು ತೆಗೆದು ಒಳಕ್ಕೆ ಹೋಗಿ ಮತ್ತೆ ಬಾಗಿಲನ್ನು ಮುಚ್ಚಿ ನೇರವಾಗಿ ಅತ್ತೆ ಮಲಗಿದ್ದ ಕೋಣೆಯೊಳಕ್ಕೆ ಹೋದಳು. ಅಲ್ಲಿ ಮೂಲೆಯ ಮಾಡದಲ್ಲೊಂದು ಹಣತೆಯ ದೀಪ ಉರಿಯುತ್ತಿತ್ತು. ಕೋಣೆಯ ಕಸ ಹೊಡೆದು ಎಷ್ಟು ದಿನಗಳಾಗಿದ್ದವೋ, ದೇವರೇ ಬಲ್ಲ. ಕಲ್ಲಿಗೂ ಗಟ್ಟಿಯಾದ ಹಾಸಿಗೆ, ಅದರ ಮೇಲೊಂದು ಬಿಳಿಯದೆಂದು ಹೇಳಲಾದ ಮುಗ್ಗುಲುಹಾಸಿಗೆ, ಇಂದ್ರನನ್ನು ಮೀರಿಸುವ ಸಹಸ್ರಾಕ್ಷರಿಯ ಕಂಬಳಿ. ಹಾಸಿಗೆ ಪಕ್ಕದಲ್ಲಿ ಉಗುಳುವುದಕ್ಕೊಂದು ತಾಮ್ರದ ತಟ್ಟೆ. ಅದು ನೀರನ್ನು ಕಾಣದೆ ತುಕ್ಕು ಹಿಡಿದು ನೀಲಿಯಮಚ್ಚೆಗಳಿಂದ ರಾರಾಜಿಸುತ್ತಿತ್ತು.

ವೆಂಕೂಬಾಯಿಯವರ ಕಣ್ಣುಗಳು ಕತ್ತಲಿಗೆ ಒಗ್ಗಿಹೋಗಿದ್ದವು. ಗೋದೂಬಾಯಿ ಬಂದಿದ್ದನ್ನು ಅವರು ನೋಡಿದರು. ಅವರ ಮುಖದ ಮೇಲೆ ಕಾತುರತೆಯ ಭಾವ ಮೂಡಿತು. ಸೊಸೆ ಹೀಗೆ ಬಂದುದರ

ಗೂಢಾರ್ಥ ತಿಳಿಯಲಿಲ್ಲ. ಏನೋ ಅನರ್ಥ ಜರುಗಿರಬೇಕೆಂದು ಊಹಿಸಿ ದರವರು. ಗೋದೂಬಾಯಿ ಮಾತನಾಡಲಿಲ್ಲ. ಅತ್ತೆಯ ಕಾಲುಬಳಿ ಸುಮ್ಮನೆ ಕುಳಿತಳು. ವೆಂಕೂಬಾಯಿಯ ಇಹಲೋಕದ ವ್ಯಾಪಾರ ಮುಗಿ ಯುವ ದಿನಗಳು ಅತಿ ಹತ್ತಿರ ಬಂದಿವೆಯೆಂದು ಆಕೆಗೆ ಮನವರಿಕೆಯಾ ಯಿತು. ಸ್ವಲ್ಪ ಸ್ಥೂಲಕಾಯದ ಪ್ರಕೃತಿಯವರೇ ಆಗಿದ್ದ ವೆಂಕೂ ಬಾಯಿಯವರು ಈಗ ಎಲುಬಿನ ಗೂಡಾಗಿದ್ದಾರೆ. ಸುಕ್ಕು ಸುಕ್ಕಾದ ಚರ್ಮ ಹಾಗೇ ಅವರ ಮೈಗೆ ಅಂಟಿದೆ. ಕಣ್ಣುಗಳು ಆಳವಾದ ಬಾವಿ ಯಲ್ಲಿ ಬಿದ್ದಂತಾಗಿದೆ. ಮೈಗೆ ಎಣ್ಣೆ ನೀರು ಮುಂತಾದ ಆರೈಕೆಗಳಿಲ್ಲದೆ ಮೊದಲೇ ಇದ್ದ ಕಾಯಿಲೆ ಇನ್ನೂ ಹೆಚ್ಚಾಗಲು ಕಾರಣವಾಗಿದೆ.

ಗೋದೂಬಾಯಿಯ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿ ಯುತ್ತಿತ್ತು. ಅತ್ತೆಗೆ ಸಮಾಧಾನ ಹೇಳುವುದರ ಬದಲು, ಆಕೆಗೆ ಅತ್ತೆಯೇ ಸಮಾಧಾನ ಹೇಳುವಂತಾಯಿತು. ವೆಂಕೂಬಾಯಿಯವರಿಗೆ ಮಾತನ್ನು ಯಾವ ರೀತಿ ಆರಂಭಮಾಡಬೇಕೆಂದು ತೋಚಲಿಲ್ಲ. ಸೊಸೆ ಅಳುತ್ತಿರುವುದರ ರಹಸ್ಯವೂ ತಟ್ಟನೆ ಹೊಳೆಯಲಿಲ್ಲ.

"ನಿಮಗೆ ಕಾಯಿಲೆಯಾಗಿದೆಯೆಂದು ಊರಲ್ಲೆಲ್ಲ ಸುದ್ದಿ, ಜೀವ ತಡೆಯಲಾರದೆ ನೋಡೋಣವೆಂತ ಬಂದೆ" ಗೋದೂಬಾಯಿ ಅಸ್ಪಷ್ಟವಾಗಿ ಬಿಕ್ಕುತ್ತ ಹೇಳಿದಳು.

"ನನಗೇನಾಗಿದೆ ಧಾಡಿ. ಏನೋ ಎರಡು ದಿನ ಜ್ವರ ಬಂದ ಹಾಗಿತ್ತು, ಮಲಗಿದ್ದೇನೆ. ಇನ್ನೇನು ಒಂದೆರಡು ದಿನಗಳಲ್ಲಿ ಮೇಲಕ್ಕೇಳು ತ್ತೇನೆ." ವೆಂಕೂಬಾಯಿಯವರಿಗೆ ತಾವು ಸುಳ್ಳು ಹೇಳುತ್ತಿರುವುದರ ಅರಿವಿತ್ತು. ಮತ್ತೆ ಮಾತು ಮುಂದುವರಿಸಿದರು.

"ಪ್ರಾಣಿ ಚೆನ್ನಾಗಿದ್ದಾನೆಯೇ?"

"ಚೆನ್ನಾಗಿದ್ದಾರೆ"

"ಎಲ್ಲಿಯಾದರೂ ಸುಖವಾಗಿರಿ" ವೆಂಕೂಬಾಯಿಯವರ ಕಣ್ಣುಗಳು ಹನಿಗೂಡಿದವು.

ಗೋದೂಬಾಯಿಗೆ ದುಃಖ ಒತ್ತರಿಸಿ ಬಂದಿತು. ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿಯೇ ಬಿಟ್ಟಳು.

"ಅತ್ತೆಯವರೇ, ನಿಮ್ಮ ಕಾಯಿಲೆಗೆ ನಾನೇ ಕಾರಣ. ಹೀಗೆ ಆಗುತ್ತದೆಂದು ನಾನು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ. ನನ್ನ ಸ್ವಾರ್ಥಸಾಧನೆಗೆ ನಿಮ್ಮನ್ನು ಬಲಿ ಕೊಟ್ಟ ಹಾಗಾಯಿತು. ತಂದೆ ಮಗನಿಗೆ ವಿರೋಧವುಂಟಾಯಿತು. ಅವರು ಬೇರೆ ಮನೆ ಮಾಡುವಂತೆ ನಾನೇ ಪ್ರೇರೇಪಿಸಿದೆ. ನನ್ನಂತೆಯೇ ತೊಳಲುತ್ತಿದ್ದ ಇನ್ನೊಂದು ಹೆಣ್ಣು ಜೀವಕ್ಕೆ ದಾರಿ ತೋರಲು ಇಷ್ಟೆಲ್ಲ ಮಾಡಿದೆ. ಆದರೆ ಇದು ನಿಮ್ಮ ಕಾಯಿಲೆಗೆ, ನಿಮ್ಮ....... ........"

"ಗೋದೂ, ನಮ್ಮ ಕರ್ಮದಲ್ಲಿ ಇದ್ದದ್ದನ್ನು ನಾವು ಅನುಭವಿಸಬೇಕು. ನಾಲ್ಕು ಜನ ಮಕ್ಕಳಿದ್ದ ದಶರಥರಾಜನ ಸಾವಿನ ಸಮಯದಲ್ಲಿ ಒಬ್ಬ ಮಗನಾದರೂ ಹತ್ತಿರವಿರಲಿಲ್ಲ. ದಶರಥರಾಜ ಮಾಡಿದಂಥ ಯಾವುದೋ ಪಾಪವನ್ನು ನಾನು ಸಹ ಮಾಡಿರಬೇಕು. ಅದಕ್ಕೆ ತಕ್ಕ ಶಿಕ್ಷೆ ಬೇಡವೆಂದರೆ ಕೇಳುತ್ತದೆಯೇ ? ಹೋಗಲಿ ಬಿಡು. ರಾಧೆಯನ್ನು ಕರೆದುಕೊಂಡು ಬರುವ ವಿಚಾರ ಕೇಳಿ ನನಗೆ ಬಹಳ ಸಂತೋಷವಾಯಿತು. ಯಾವ ಪಾಪವನ್ನೂ ಅರಿಯದ ಹೆಣ್ಣು. ನಮ್ಮವರ ದುರಾಗ್ರಹಕ್ಕೆ ತುತ್ತಾಗಿ ಪಡಬಾರದ ಕಷ್ಟ ಅನುಭವಿಸಿತು. ಅದಕ್ಕೆ ದೇವರೇ ಮಾರ್ಗ ತೋರಿಸಿದ್ದಾನೆ. ಪ್ರಾಣೇಶನನ್ನು ಅವಳನ್ನು ಸಾಕಿ ಸಲಹುವ ಭಾರ ನಿನ್ನ ಮೇಲಿರಲಿ."

"ಆಗಲಿ ಅತ್ತೆ, ನಿಮ್ಮ ಆಶೀರ್ವಾದವೊಂದು ನನ್ನ ತಲೆಯ ಮೇಲಿದ್ದರೆ ಅದಾವ ದೊಡ್ಡ ವಿಷಯ."

"ನೀನಿನ್ನು ಹೊರಡು ತಾಯಿ, ಅವರು ಬರುವ ಹೊತ್ತಾಯಿತು. ಅಕಸ್ಮಾತ್ತಾಗಿ ಬಂದರೆ ದೊಡ್ಡ ರಾದ್ಧಾಂತ ಮಾಡುತ್ತಾರೆ."

"ನ್ಯಾಮತಿಗೆ ರಾಧಾಬಾಯಿಯನ್ನು ಕರೆದುಕೊಂಡು ಬರಲು ಹೋಗಿದ್ದಾರೆ. ನಾಳೆಯೇ ಮೇಷ್ಟರು ಬರಬಹುದು. ಆದರೆ ನೀವು ಹೀಗೆ ................"

"ನೀನು ಯಾವ ಯೋಚನೆಯನ್ನೂ ಮಾಡಬೇಡ. ನಿಮ್ಮ ಶುಭ ಕಾರ್ಯಕ್ಕೆ ನಾನೆಂದೂ ಅಡ್ಡ ಬರುವುದಿಲ್ಲ. ರಾಧಾಬಾಯಿ ನಿಮ್ಮ ಮನೆಗೆ ಬರುವವರೆಗೂ ನಾನು ಸಾಯುವುದಿಲ್ಲ."

ಗೋದೂಬಾಯಿ ಅತ್ತೆಗೆ ನಮಸ್ಕಾರ ಮಾಡಿದಳು. ಅತ್ತೆ ಸೊಸೆಯ ರಿಬ್ಬರ ಕಣ್ಣುಗಳಲ್ಲೂ ನೀರು ಮಿಡಿಯಿತು. ಗೋದೂಬಾಯಿ ನಿಧಾನವಾಗಿ ಬಾಗಿಲು ತೆರೆದು ಹೊರಟಳು. ಎದುರಿಗೆ ವೆಂಕೋಬಾಚಾರಿ ಬರುತ್ತಿದ್ದ.

"ಮನೆ ಮುರಕರಂಡೇ, ಇಲ್ಲಿಗ್ಯಾಕೆ ಬಂದೆ ಹೇಳು" ವೆಂಕೋಬಾಚಾರಿ ಆರ್ಭಟಿಸಿದ. ಗೋದೂಬಾಯಿ ಚಿಟ್ಟನೆ ಚೀರಿದಳು.

"ಅತ್ತೆಯವರನ್ನು ನೋಡಿಕೊಂಡು ಹೋಗೋಣವೆಂದು ಬಂದೆ" ಎಂದು ಹೇಳುತ್ತಾ ಆಕೆ ಅಳತೊಡಗಿದಳು.

ನೆರೆಹೊರೆಯ ಜನರು ಬಂದು ಸೇರಿದರು. ವೆಂಕೋಬಾಚಾರಿ ಬುಸು ಗುಟ್ಟುತ್ತಿದ್ದ.

"ನನ್ನ ಮನೆ ಹಾಳು ಮಾಡಿದವಳೀ ಇವಳು. ಇದ್ದ ಒಬ್ಬ ಮಗ ನನ್ನು ಕಸಿದುಕೊಂಡು ಹೋದಳು. ಈಗ ಮತ್ತೇನು ಮಸಲತ್ತು ಮಾಡಲು ಬಂದಿದ್ದಾಳೋ ಯಾರಿಗೆ ಗೊತ್ತು?"

ಸೇರಿದ ಜನ ಆಚಾರಿಯನ್ನು ಸಮಾಧಾನಪಡಿಸಿದರು. ಸಾಯುವ ಅತ್ತೆಯನ್ನು ಕಡೆಗೊಂದುಬಾರಿ ನೋಡಿ ಹೋಗಲು ಗೋದೂಬಾಯಿ ಬಂದಿದ್ದಾಳೆಂದು ಅವರಿಗೆ ಗೊತ್ತು. ಆದರೆ ಅದನ್ನು ಹೇಳದೆ ರೊಚ್ಚಿಗೆದ್ದ ಆಚಾರಿಯನ್ನು ಸಮಾಧಾನಪಡಿಸಿ ಅವರವರ ಮನೆಗೆ ಕಳಿಸಿಕೊಟ್ಟರು.

"ಅಮ್ಮಾ ನೀವು ಯಾವ ಯೋಚನೆಯನ್ನೂ ಮಾಡದೆ ರಾಧೆಯನ್ನು ಹೊನ್ನಾಳಿಗೆ ಕರೆದುಕೊಂಡು ಬನ್ನಿ. ಪ್ರಾಣೇಶ ಬೇರೆ ಮನೆ ಮಾಡಿದ್ದಾನೆ. ರಾಧೆ ಬರಲು ಅವನ ಹೆಂಡತಿ ಗೋಧೂಬಾಯಿಯೇ ಒತ್ತಾಯ ಹಾಕುತ್ತಿದ್ದಾಳೆ."

"ಏನೋಪ್ಪ, ಆ ವಿಚಾರಾನೇ ನಾವೆಲ್ಲಾ ಮರೆತುಬಿಟ್ಟದ್ದೇವೆ. ಅವಳ ಅದೃಷ್ಟದಲ್ಲಿ ಸಂಸಾರ ಮಾಡಿಕೊಂಡಿರಬಾರದು ಅಂತ ಇದ್ದಿರಬೇಕು. ಮಾಧವಾಚಾರಿ ಇವರೆದುರು ಏನೇನೋ ಹೇಳಿದ. "ಸೀತಾಬಾಯಿಯವರ ಕಣ್ಣಿಂದ ತಟಕ್ಕನೆ ಹನಿಗಳು ಉದುರಿದವು. ಅವರ ಬಾಯಿಂದ ಮಾತುಗಳು ಹೊರಡಲಿಲ್ಲ.

"ಹಿಂದೆ ಆದದ್ದನ್ನೆಲ್ಲಾ ಮರೆತುಬಿಡಿ. ಅದೊಂದು ಕಾಡುವ ಕಾಲ. ಆಗಬಾರದ ಅನ್ಯಾಯ ಆಗಿಹೋಯಿತು. ಆ ಅನ್ಯಾಯ ಸರಿ ಹೊಂದುವ ಕಾಲ ಬಂದಿದೆ. ನೀವು ಒಂದು ಬಿಡಿಗಾಸು ತರಬೇಡಿ. ಎಲ್ಲ ಕೆಲಸಗಳೂ ಸಾಂಗವಾಗಿ ನೆರವೇರಲು ಏರ್ಪಾಟಾಗಿದೆ." ಮೇಷ್ಟರು ನಿಧಾನವಾಗಿ ಹೇಳಿದರು.

ಮೇಷ್ಟರ ಎಣಿಕೆ ತಪ್ಪಾಯಿತು. ರಾಧೆಯನ್ನು ಗಂಡನ ಮನೆಗೆ ಕರೆದುಕೊಂಡು ಹೋಗಲು ಬಂದಿರುವುದಾಗಿ ತಾವು ಹೇಳಿದ ಕ್ಷಣವೇ ಸೀತಾಬಾಯಿಯವರು ಒಪ್ಪಿ ಆ ಕೂಡಲೇ ಕಳಿಸಿಕೊಡುವರೆಂದು ಅವರು ತಿಳಿದಿದ್ದರು. ಅವರ ಗ್ರಹಿಕೆ ತಪ್ಪಾಯಿತು. ರಾಧೆಯ ಕರ್ಮಕಾಂಡವನ್ನು ಅವರು ಆಗಲೇ ಪೂರೈಸಿದ್ದರು. ಏನೋ ಆಗಬಾರದು ಆಗಿಹೋಯಿತು. ಅದೆಂದಿಗೂ ಸರಿ ಹೋಗುವುದಿಲ್ಲ. ಅವಳನ್ನು ಗಂಡುಮಗನಂತೆ ಮನೆಯಲ್ಲಿ ಸಾಕಿ ಸಲಹುತ್ತಿದ್ದೇವೆ—ಇದು ಮನೆಯವರ ತೀರ್ಮಾನ. ಅಲ್ಲದೆ ಸವತಿ ಇರುವ ಮನೆಗೆ ಮಗಳನ್ನು ಕಳಿಸುವದಾದರೂ ಹೇಗೆ? ಸವತಿಯೇ ರಾಧೆಯನ್ನು ಕರೆತರಲು ಹೇಳಿಕಳಿಸುವುದನ್ನು ಯಾರು ನಂಬುತ್ತಾರೆ? ತನ್ನ ಕೈಲಿ ಸಾಗದ್ದ

ರಿಂದ ದುಡಿಯಲು ಒಂದು ಆಳು ಬೇಕಾಗಿರುವದರಿಂದ ಈ ಹೊಟ ಹೊಡಿರ ಬಹುದೇ ? ಇಂಥ ನೂರಾರು ಪ್ರಶ್ನೆಗಳು ಸೀತಾಬಾಯಿಯವರ ಬೋಳು ತಲೆಯಲ್ಲಿ ಸುಳಿದಾಡಿ ಆಂದೋಲನವನ್ನೆಬ್ಬಿಸಿದವು. ಆದರೂ ಬಂದ ದೊಡ್ಡ ಮನುಷ್ಯನಿಗೆ ಅವಮರ್ಯಾದೆ ಮಾಡಕೂಡದೆಂದು ಎಣಿಸಿ,

''ನಮ್ಮ ಅತ್ತೆಯವರಿದ್ದಾರೆ, ಯಜಮಾನಿಕೆ ಹೊತ್ತಿರುವ ಮಗ ನಿದ್ದಾನೆ ಮತ್ತು ರಾಧೆ ಇದ್ದಾಳೆ. ಅವರೆಲ್ಲಾ ಏನು ಹೇಳುತ್ತಾರೋ ಕೇಳಿ'' ಎಂದು ತಾವು ಜಾರಿದರು.

ಮೇಷ್ಟರು ರಾಧೆ ಸಮೇತ ಮಧ್ಯಾಹ್ನದ ಬಸ್‌ನಲ್ಲಿಯೇ ಹೋಗ ಬೇಕೆಂದು ಬಂದವರು ಅನಿವಾರ್ಯವಾಗಿ ನಿಲ್ಲಲೇಬೇಕಾಯಿತು. ನಗರ ಯಾತ್ರೆ ಕೈಕೊಂಡಿದ್ದ ರಮಾಬಾಯಿಯವರು ಇನ್ನೂ ಮನೆಗೆ ಬಂದಿರಲಿಲ್ಲ. ಅವರು ಬರುವುದು ಹನ್ನೆರಡು ಗಂಟೆ ಹೊಡೆದಮೇಲೆಯೇ. ಹಳ್ಳಿಯಮೇಲೆ ಕಂದಾಯದ ಬಾಕಿ ವಸೂಲಿಗೆ ಹೋಗಿದ್ದ ರಾಮು ಸಾಯಂಕಾಲ ಐದು–ಆರರ ಸುಮಾರಿಗೆ ಬರುವನೆಂದು ಸೀತಾಬಾಯಿಯವರು ತಿಳಿಸಿದರು.

ಒಂದು ಚಿಕ್ಕ ಕಂಚಿನ ಲೋಟದಲ್ಲಿ ರಾಧೆ ''ಕಪ್'' ಕಾಫಿ ತಂದಿಟ್ಟಳು. ಕಾಫಿಗೆ ಯಾವ ಪುಡಿ ಹಾಕಿದ್ದರೆಂದು ಹೇಳಲು ಕೆಮಿಕಲ್ ಎಗ್ಝಾಮಿನರ್‌ಗೇ ಕಳಿಸಬೇಕಾಗಿತ್ತು. ಸೀತಾಬಾಯಿಯವರ ಮೌನವನ್ನು ಬೇಧಿಸಲು ''ಇವಳೇನೇ ರಾಧಾಬಾಯಿ ? ಮುದ್ದಾಗಿದ್ದಾಳೆ. ಇಂತಹ ಕನ್ಯಾರತ್ನವನ್ನು ಕಾಲಿನಿಂದೊದೆದ ವೆಂಕೋಬಾಚಾರಿಗೆ ದೇವರು ಸ್ಪೆಷಲ್ಲಾಗಿ ನರಕದಲ್ಲಿ ಸೀಟ್ ರಿಸರ್ವ್‌ಮಾಡಿಸಿರಬೇಕು. ನಾಲ್ಕು ಬಿಡಿಕಾಸಿನ ದುರಾಶೆಗೆ ಮಾಡ ಬಾರದ ಮಹಾಪರಾಧಮಾಡಿದ್ದಾನೆ.'' ಮೇಷ್ಟರು ಮೆಲ್ಲಗೆ ರಾಗ ಎಳೆದರು.

"ಹುಡುಗಿ ಒಳ್ಳೆಯ ಮನೆಗೆ ಸೇರಲೆಂದು ಕೈಯಲ್ಲಿದ್ದ ಚೂರುಪಾರನ್ನು ಸಹ ವೆಂಕೋಬಾಚಾರ್ಯರಿಗೆ ಕೊಟ್ಟೆವು. ಆದರೂ ಮಾಡಿದ ಕಾರ್ಯ ವಿಹಿತ ವಾಗಲಿಲ್ಲ. ಮಧ್ಯೆ ನಿಂತ ಮಾಧವಾಚಾರಿ ನಮ್ಮ ಕುತ್ತಿಗೆ ಕೊಯ್ದರು. ನಮ್ಮ ಹುಡುಗಿಯ ವಿಚಾರ ನಾವೇನು ಹೇಳೋಣ. ರೂಪಿನಲ್ಲಿ ಒಂದುಪಕ್ಷ ಕಡಿಮೆ ಇರಬಹುದು. ಆದರೆ ಗುಣದಲ್ಲಿ ಅವಳಿಗೆ ಸರಿ ಯಾರಿದ್ದಾರೆ ? ಆದರೇನು, ಅವಳು ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲವನ್ನು ಅನುಭವಿಸು ತ್ತಿದ್ದಾಳೆ. ಅದನ್ನು ನೋಡಿ ಹಡೆದ ಹೊಟ್ಟೆಯೂ ಉರಿಯುತ್ತಿದೆ ...... ......"

ಮೇಷ್ಟರು ಯಾವರೀತಿ ಮಾತು ತಿರುಗಿಸಿದರೂ ಸೀತಾಬಾಯಿಯವರು ಪುನಃ ಪುನಃ ವೆಂಕೋಬಾಚಾರಿ ಮತ್ತು ಮಾಧವಾಚಾರಿಯ ಮಸಲತ್ತನ್ನು ಮುಂದೂಡುತ್ತಿದ್ದರು. ಅವರ ಸಿಟ್ಟಿನ ಆವೇಗ ಕೊಂಚ ಕಮ್ಮಿಯಾಗಲೆಂದು, " ನಾನು ಸ್ವಲ್ಪ ಹೊರಕ್ಕೆ ಹೋಗಿ ಬರುತ್ತೇನೆ. ಆಮೇಲೆ ಎಲ್ಲಾ ವಿಷಯ ಮಾತನಾಡೋಣ. ನಿಮ್ಮತ್ತೆಯವರು ಮತ್ತು ಮಗ ಮನೆಗೆ ಬರಲಿ. " ಎಂದು ಹೇಳಿ ಹೊರಗೆ ಹೋಗಲು ಅನುವಾದರು.

" ಸ್ನಾನಕ್ಕೆ ನೀರು ಕಾದಿದೆ. ಸ್ನಾನ ಮುಗಿಸಿಬಿಡಿ. ಹನ್ನೆರಡರ ಹೊತ್ತಿಗೆ ಎಲೆ ಹಾಕುತ್ತೆ." ಸೀತಾಬಾಯಿಯವರು ಸಮಾಧಾನದಿಂದ ಹೇಳಿದರು.

ಮೇಷ್ಟರು ಸ್ನಾನದ ಶಾಸ್ತ್ರ ಮುಗಿಸಿ ಹಾಗೆಯೇ ತಮ್ಮ ಪರಿಚಿತರ ಮನೆಯತ್ತ ತೆರಳಿದರು.

ಹನ್ನೆರಡರ ಸುಮಾರಿಗೆ ರಮಾಬಾಯಿಯವರು ಮನೆಗೆ ಬಂದರು. ಬಾಗಿಲ ಮೂಲೆಯಲ್ಲಿದ್ದ ಮೇಷ್ಟರ ಗಂಟನ್ನು ನೋಡಿ, " ಯಾರೋ ಬಂದ ಹಾಗಿದೆ ? ಯಾರು ಬಂದಿದ್ದಾರೆ ? " ಅಂತ ಕೇಳಿದರು. "ಯಾರೋ ಮೇಷ್ಟರಂತೆ, ಹೊನ್ನಾಳಿಯವರಂತೆ" ಅಂತ ಸೀತಾಬಾಯಿ ಹೇಳಿದರು. ರಮಾಬಾಯಿಯವರಿಗೆ ಈ ಒಗಟೆ ಅರ್ಥವಾಗಲಿಲ್ಲ.

ಸೀತಾಬಾಯಿಯವರು ಸೂಕ್ಷ್ಮವಾಗಿ ನಾಲ್ಕು ಮಾತುಗಳಲ್ಲಿ ಮೇಷ್ಟರ ಆಗಮನದ ಆಂತರ್ಯವನ್ನು ವಿವರಿಸಿದರು. ಆದರೆ ವಿಚಾರದಲ್ಲಿ ಟೀಕೆಮಾಡದೆ ಸುಮ್ಮನಿದ್ದರು.

ಬಿಸಿಲಿನ ಕಾವಿನಿಂದ ಸಿಟ್ಟು ನೆತ್ತಿಗೇರಿತೋ, ಅಥವಾ ವಿಷಯವೇ ಕಾವಿನಿಂದ ಕೂಡಿದ್ದಿತೋ, ರಮಾಬಾಯಿಯವರು ಒಂದೇ ಬಾರಿಗೆ ಆರ್ಭಟಿಸ ಲಾರಂಭಿಸಿದರು. " ರೆಟ್ಟೆಗಾತ್ರ ಮೀಸೆ ಹೊತ್ತ ಗಂಡಸರಿವರು. ಇವರ ಮೀಸೇನ ಕತ್ತರಿಸಿ ಒಲೆಗೆ ಹಾಕಿದರೆ ಒಂದು ಹಂಡೆ ನೀರು ಕಾಯುತ್ತದೆ. ಹಿಡಿ ಹೊನ್ನಿಗಾಗಿ ಏನು ಅನ್ಯಾಯ ಮಾಡಲು ಹೇಸದಂಥ ನೀಚರು. ಇವರ ಹೊಟ್ಟೆಯಲ್ಲಿಯೇ ನಾಲ್ಕು ಹೆಣ್ಣು ಹುಟ್ಟಿದ್ದರೆ ಏನು ಮಾಡುತ್ತಿದ್ದರೋ ? ಈಗ ಕಾಗಕ್ಕ ಗುಬ್ಬಕ್ಕನ ಕಥೆ ಕಟ್ಟಿಕೊಂಡು ಹುಡುಗಿಯನ್ನು ಕಳಿಸಬೇಕೆಂದು

ಬಂದಿದ್ದಾರೆ. ಅದ್ಯಾವನು ಬಂದು ಕರೆದುಕೊಂಡು ಹೋಗುತ್ತಾನೋ, ನೋಡುತ್ತೇನೆ." ಎಂದು ಸಿಡಿಲಿನ ಮರಿಯನ್ನು ಛೂ ಬಿಟ್ಟರು.

"ಅತ್ತೆ, ಅದೆಲ್ಲಾ ಇರಲಿ, ಹೊತ್ತಾಗಿದೆ, ನೀವು ಮೊದಲು ಮೈ ತೊಳೆದುಕೊಳ್ಳಿ." ಸೀತಾಬಾಯಿಯವರು ಸಮಾಧಾನದಿಂದ ಹೇಳಿದರು.

ಮೇಷ್ಟರು ಬಂದವರೇ ಪಡಸಾಲೆಯಲ್ಲಿ ಹಾಕಿದ್ದ ಹೆರಕಲು ಚಾಪೆಯ ಮೇಲೆ ಕುಳಿತರು. ಸ್ನಾನಮಾಡುತ್ತಿದ್ದ ರಮಾಬಾಯಿಯವರು ವೆಂಕೋಬಾ ಚಾರಿಯನ್ನು ಅವ್ಯಾಹತವಾಗಿ ಬಯ್ಯುತ್ತಿದ್ದ ಮಂತ್ರೋಚ್ಚಾರಣೆ ಅವರ ಕಿವಿಗೆ ಬಿತ್ತು. ಸೀತಾಬಾಯಿಯವರನ್ನು ಗೆಲ್ಲಬಹುದಾದರೂ ಅವರತ್ತೆ ಯನ್ನು ಗೆಲ್ಲುವುದು ಕಠಿಣವೆಂದು ಅವರಿಗೆ ಮಂದಟ್ಟಾಯಿತು. ಏಕಾಂಗಿ ಯಾಗಿ ಈ ಕೆಲಸವನ್ನು ಸಾಧಿಸುವುದು ದುಸ್ಸಾಧ್ಯವೆಂದು ಅವರಿಗೆ ತಿಳಿಯಿತು. ಮುಂದೇನು ಮಾಡಬೇಕೆಂಬುದನ್ನೂ ಅವರು ನಿರ್ಧರಿಸಿದರು

ಈ ವೇಳೆಗೆ ರಮಾಬಾಯಿಯವರ ಸ್ನಾನದ ಕಾರ್ಯ ಮುಗಿದಿದ್ದಿತು. ಸುಮ್ಮನೆ ಮೈಗಿಷ್ಟು ನೀರು ಸುರಿದುಕೊಂಡರೆ ಆಯಿತು. ಮೈಯ ಕೊಳೆ ಹೋಗುವುದಕ್ಕಿಂತ ಇಲ್ಲಿ ಮಡಿ ಮಾಡುವುದೇ ಹೆಚ್ಚಾಗಿರುತ್ತದೆ. ಮೊದಲು ಮೈಲಿಗೆಯಲ್ಲಿ ಕಾಯಿಸಿದ ಬಿಸಿನೀರನ್ನು ಸುರಿದುಕೊಂಡು ಅನಂತರ ಮಡಿ ಯೆಂದು ಹೇಳಲಾದ ಎರಡು ಅಥವಾ ಮೂರು ದಿನಗಳ ಹಿಂದೆ ತುಂಬಿದ್ದ—ಜಿರಲೆ ಇತ್ಯಾದಿ ಕ್ರಿಮಿಕೀಟಗಳ ನಾನಾ ಸಂಸಾರಗಳ ಸಮೇತ—ತಪ್ಪಲೆ ಯನ್ನು ಹುಯ್ದುಕೊಳ್ಳುವುದು. ಎಂದೂ ನೀರು ಕಾಣದಿದ್ದ ನಾರುಮಡಿ (ಧಾಬಳಿ) ಯನ್ನು ಸುತ್ತಿಕೊಳ್ಳುವುದು. ನಾರುಮಡಿ ಎಂದರೆ ನಾರಿನ ಮಡಿ ಅಂತ ಅನೇಕರು ಅರ್ಥಮಾಡುತ್ತಾರೆ. ಇದು ಶುದ್ಧಾಂಗ ತಪ್ಪು. ಅಂಗಡಿ ಯಿಂದ ತಂದ ದಿನದಿಂದ ಇದು ನೀರು ಕಾಣದ್ದರಿಂದ ಕೊಳೆ ಸೇರಿ ನಾರು ತ್ತಿರುತ್ತದೆ. ಅದಕ್ಕೇ 'ನಾರುಮಡಿ' ಎಂದು ಹೇಳುತ್ತಾರೆ. ಮತ್ತು ಇದರ ಇನ್ನೊಂದು ವೈಶಿಷ್ಟ್ಯವೇನೆಂದರೆ, ಇದರ ಉದ್ದ ಅಗಲ ಸಾಮಾನ್ಯ ಸೀರೆ ಗಳಿಗಿಂತ ಕಡಿಮೆ ಇರುವದರಿಂದ ಇದು ಅಂಗಾಂಗಗಳನ್ನು ಸಾಕಷ್ಟು ತೃಪ್ತಿ ಕರವಾಗಿ ಮುಚ್ಚುವುದಿಲ್ಲ.

ರಮಾಬಾಯಿಯವರು ವೆಂಕೋಬಾಚಾರಿಯ ಬೈಗಳ ಮಂತ್ರದಿಂದಲೇ ವೃಂದಾವನದ ಕಟ್ಟೆಗೆ ಒಂದು ಚೊಂಬು ನೀರು ಸುರಿದರು. ವೃಂದಾವನ

ಕಟ್ಟೆಯಲ್ಲಿ ಎಲ್ಲವೂ ಇರುತ್ತದೆ–ತುಳಸಿಗಿಡವೊಂದನ್ನು ಉಳಿದು. ಅಜರಾಜನಿಗೆ ತುಳಸಿಗಿಡವು ಎಂದೋ ಆಹುತಿಯಾಗಿತ್ತು. ಆದರೆ ತುಳಸಿಗೆ ನೀರು ಹಾಕದಿದ್ದರೆ ಹೇಗೆ? ವೃಂದಾವನದ ಕಟ್ಟೆಗೆ ನೀರು ಹಾಕಿದರೆ, ತುಳಸಿಗೆ ನೀರು ಹಾಕಿದ್ದರಲ್ಲಿ ಸ್ವಲ್ಪ ಭಾಗವಾದರೂ ಪುಣ್ಯ ಬರಲೇ ಬೇಕು.

ದೇವರ ಪೂಜಾವಿಧಿಯು ಸಹ ವೆಂಕೋಬಾಚಾರಿ, ಮಾಧವಾಚಾರಿಯರ ಸಹಸ್ರನಾಮದಿಂದಲೇ ಮುಕ್ತಾಯವಾಯಿತು.

ರಮಾಬಾಯಿಯವರು ನಾರುಮಡಿ ಬಿಟ್ಟು ಬೇರೆ ಮಡಿಸೀರೆಯೊಂದನ್ನು ಸುತ್ತಿಕೊಂಡು ನಡುಮನೆಯಲ್ಲಿ ಕುಳಿತರು.

"ನೀವೇನೋ ಹೊನ್ನಾಳಿಯಿಂದ ಬಂದಿರುವ ಮೇಷ್ಟರು? ಬೇರೆ ನಿಮಗೇನು ಕೆಲಸವಿಲ್ಲೇನು?"

"ಯಾಕೆ ತಾಯಿ?"

"ರಾಧಾಬಾಯಿಯನ್ನು ಕರೆದುಕೊಂಡು ಬರಲು ವೆಂಕೋಬಾಚಾರಿ ಕಳಿಸಿದ್ದಾನೇನು? ಅವನ ವಂಶ ನಿರ್ವಂಶವಾಗ."

"ಅಲ್ಲಿಯ ವಿಚಾರವನ್ನೆಲ್ಲ ನಿಮ್ಮ ಸೊಸೆ ಎದುರು ಸೂಕ್ಷ್ಮವಾಗಿ ಹೇಳಿದ್ದೇನೆ. ನಾನೂ ಮಕ್ಕಳೊಂದಿಗ. ರಾಧಾಬಾಯಿ ವಯಸ್ಸಿನ ಮಗಳೊಬ್ಬಳು ನನಗಿದ್ದಾಳೆ. ಈ ವ್ಯವಹಾರದಲ್ಲಿ ನಾನೇನಾದರೂ ಹಣದ ಆಶೆಗೆ ಬಲಿ ಬಿದ್ದಿದ್ದರೆ, ತಾಯಿ, ನೀವಿಟ್ಟ ಶಾಪ ನನಗೂ, ನನ್ನ ವಂಶಕ್ಕೂ ತಟ್ಟಲಿ."

"ಮಾಧವಾಚಾರಿಯೂ ಇಂಥ ಬೆಣ್ಣೆ ಮಾತುಗಳನ್ನೇ ಆಡುತ್ತಿದ್ದ. ಕೊನೆಗೆ ನಮ್ಮ ಮನೆಯನ್ನೇ ಮುರಿದ. ಆ ಹೋತನ ಗಡ್ಡದ ಆಚಾರಿ ನನ್ನ ಕೈಗೆ ಸಿಗಲಿ................."

"ಪ್ರಪಂಚದಲ್ಲಿ ಒಂದೇ ರೀತಿಯ ಮನುಷ್ಯರಿರುತ್ತಾರೇನು? ನನ್ನ ವಿಷಯವನ್ನ ನಾನು ಹೇಳಿಕೊಳ್ಳುವದಿಲ್ಲ. ನನ್ನನ್ನು ನಂಬಿ. ಏನೋ ಒಂದು ಒಳ್ಳೆಯ ಕೆಲಸ ಮಾಡಬೇಕೆಂದು ಹೊರಟಿದ್ದೇನೆ. ನೀವು ಅಡ್ಡಿ ಒಡ್ಡಬೇಡಿ. ನಿಮಗೆಲ್ಲ ಹಿತವಾಗಲೆಂಬುದೇ ನನ್ನ ಬಯಕೆ."

"ಎಲೆ ಹಾಕಿದೆ, ಕಾಲು ತೊಳೆದುಕೊಳ್ಳಿ" ಎಂದು ಸೀತಾಬಾಯಿಯವರು ಮಧ್ಯೆ ಬ್ರೇಕ್ ಹಾಕಿದರು.

ಮೇಷ್ಟರ ಗಂಟಲಿನಲ್ಲಿ ಒಂದು ತುತ್ತು ಅನ್ನ ಸಹ ಇಳಿಯಲಿಲ್ಲ. ರಮಾಬಾಯಿಯವರ ಮಾತಿನ ಮಳೆ ನಿಲ್ಲಲೇ ಇಲ್ಲ. ಸೀತಾಬಾಯಿಯವರು ಮಾತು ಮರೆಸಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಮನೆಗೆ ಬಂದ ಅತಿಥಿಯನ್ನು ಉಪಚರಿಸಬೇಕೆಂದು ಅವರು ಮಾಡಿದ ಪ್ರಯತ್ನ ನಿರರ್ಥಕವಾಯಿತು.

ಮೇಷ್ಟರ ಮುಖಭಾವ, ಅವರ ಮಾತಿನ ಧಾಟಿ ನೋಡಿ ಸೀತಾ ಬಾಯಿಗೆ ಅವರಲ್ಲಿ ವಿಶ್ವಾಸ ಹುಟ್ಟಿತು. ತಮ್ಮ ಮಗಳ ಸಂಕಟ ವಿಮೋಚನೆಯ ಕಾಲ ಹತ್ತಿರ ಬಂದಿದ್ದರೂ ಬಂದಿರಬಹುದೆಂದು ಅವರ ಅಂತರಂಗ ಹೇಳಿತು. ಗೋದೂಬಾಯಿ ನಾಲ್ಕು ಮಕ್ಕಳನ್ನು ಕಳೆದುಕೊಂಡಿದ್ದು, ರಾಧೆಯನ್ನು ಕರೆದು ಕೊಂಡು ಬರಬೇಕೆಂದು ಆಕೆ ಹಟ ಹಿಡಿದದ್ದು, ಈ ಕಾರಣಕ್ಕಾಗಿ ಪ್ರಾಣೇಶ ತಂದೆ ಮನೆ ಬಿಟ್ಟು ಬೇರೆ ಮನೆ ಮಾಡಿದ್ದು ಇವು ಒಂದಕ್ಕೊಂದಕ್ಕೆ ಹೊಂದಿಕೆ ಆಗಿದ್ದವು. ಆದರೂ ಅವರು ತಮ್ಮ ಮನಸ್ಸಿನಲ್ಲಿದ್ದುದನ್ನು ಪ್ರಕಟ ಮಾಡಲು ಧೈರ್ಯವಾಗಲಿಲ್ಲ.

ಮೇಷ್ಟರು ಏನು ಮಾತನಾಡುವುದಕ್ಕೂ ರಮಾಬಾಯಿಯವರು ಅವಕಾಶ ಕೊಡಲಿಲ್ಲ. ಅವರ ಮಾತೇ ಮಾತು. ತಮಗೆ ಪರಿಚಿತರಾದ ನಾಲ್ಕು ಜನ ದೊಡ್ಡ ಮನುಷ್ಯರಿಂದ ಹೇಳಿಸಿ ರಾಧೆಯನ್ನು ಕರೆದುಕೊಂಡು ಹೋಗಲು ನಿಶ್ಚೈಸಿದರು.

ಹೊರಗಿನ ಪಡಸಾಲೆಯಲ್ಲಿ ಹಾಸಿದ್ದ ಹರಕು ಚಾಪೆಯಮೇಲೆ ಹಿತ್ತಾಳೆ ತಟ್ಟೆಯಮೇಲೆ ಎಲೆ, ಅಡಕೆ ತಂದಿಡಲಾಗಿತ್ತು. ಅವು ವೀಳೆಯ ದೆಲೆ ಎಂದು ಹೇಳುವುದು ಕಷ್ಟವಾಗಿತ್ತು, ಮುತ್ತುಗದ ಎಲೆ ಇದ್ದ ಹಾಗಿದ್ದವು. ಅದಕ್ಕೆ ತಕ್ಕ ಅಡಕೆ. ಗಟ್ಟಿಯಾದ ನಾಲ್ಕು ಹಲ್ಲುಗಳನ್ನು ಮುರಿದುಕೊಳ್ಳಲು ಮೇಷ್ಟರು ಇಚ್ಛೆಪಡಲಿಲ್ಲ. ಈ ಎಲೆಗೆ ಹಚ್ಚಲು ಜಾಗಟೆ ಸುಣ್ಣ. ಈ ಸುಣ್ಣವನ್ನು ಎಲೆಗೆ ಹಚ್ಚಿ ಜಾಗಟೆ ಹೊಡೆದ ಹಾಗೆ ಬೆರಳಿನ ತುದಿಯಿಂದ ಹೊಡೆಯಬೇಕು. ಹಾಗಾದರೇನೆ ಅದರಲ್ಲಿರುವ ನುಚ್ಚು ಕಲ್ಲು ಗಳೆಲ್ಲಾ ಕೆಳಕ್ಕೆ ಉದುರುತ್ತವೆ. ತಾವು ಎಲೆ, ಅಡಕೆ ಹಾಕುವ ಅಭ್ಯಾಸ ವನ್ನು ಕಾಶಿಗೆ ಹೋದಾಗ ಬಿಟ್ಟುಬಂದಿರುವದಾಗಿ ಮೇಷ್ಟರು ಹೇಳಿದರು.

ಮತ್ತು ಸ್ವಲ್ಪ ಕೆಲಸ ಇದೆಯೆಂದೂ ಪೇಟೆ ಕಡೆ ಹೋಗಿ ಬರುವದಾಗಿಯೂ ಹೇಳಿ ಹೊರಟುಹೋದರು.

ಸಂಜೆ ನಾಲ್ಕು ಗಂಟೆ ಸುಮಾರಿಗೆ ರಾಮು ಬಂದ. ಅವನಿಗೆ ಸೀತಾಬಾಯಿಯವರು ಮೇಷ್ಟರು ಬಂದಿರುವ ವರ್ತಮಾನವನ್ನು ಸಾದ್ಯಂತವಾಗಿ ವಿವರಿಸಿದರು. ಈ ವೇಳೆಗೆ ಪ್ರಾಣೇಶ ಬೇರೆ ಮನೆ ಮಾಡಿದ ವಿಚಾರ ರಾಮೂನ ಕಿವಿಗೆ ಬಿದ್ದಿತ್ತು. ಮನೆಯಲ್ಲಿ ಇದನ್ನು ಹೇಳಿದರೆ ಸುಮ್ಮನೆ ರೇಸಿಗೆ ಎಬ್ಬಿಸುತ್ತಾರೆಂದು ಸುಮ್ಮನಿದ್ದ.

ಮೇಷ್ಟರು ಆರು ಗಂಟೆ ಹೊತ್ತಿಗೆ ನಾಲ್ಕು ಜನ ಸದ್ಗೃಹಸ್ತರೊಂದಿಗೆ ಬಂದರು. ರಮಾಬಾಯಿಯವರೊಬ್ಬರನ್ನು ಒಲಿಸಿದರೆ ತಮ್ಮ ಕೆಲಸ ಹಗುರವಾಗುವದೆಂದು ಅವರಿಗೆ ಗೊತ್ತಿತ್ತು.

ಬಂದವರು ಮನೆಯವರಿಗೆಲ್ಲ ಸಮಾಧಾನ ಹೇಳಿದರು. ಮಕ್ಕಳನ್ನು ಕಳೆದುಕೊಂಡು ಪಶ್ಚಾತ್ತಾಪದಿಂದ ಗೋದೂಬಾಯಿಯೇ, ರಾಧೆಯನ್ನು ಕರೆತರಲು ಸಮ್ಮತಿ ಕೊಟ್ಟಿದ್ದಾರೆಂದು ತಿಳಿಸಿದರು. ಆದರೂ ರಮಾಬಾಯಿಯವರು ಮಣಿಯಲಿಲ್ಲ. "ಹುಡುಗಿ ಮನೆಯಲ್ಲೇ ಇದ್ದರೂ ಚಿಂತೆಯಿಲ್ಲ ಆ ಚಂಡಾಲರ ಮನೆಗೆ ಕಳಿಸುವದಿಲ್ಲ'' ಎಂದು ಗುಡುಗಿದರು. ಸೀತಾಬಾಯಿಯವರು ಮತ್ತು ರಾಮು ಮೇಷ್ಟರ ಸೂಚನೆಗೆ ಸಮ್ಮತಿ ಇತ್ತಿದ್ದನ್ನು ಕೇಳಿ ಅವರು ಕಿಡಿಕಿಡಿಯಾದರು. "ಈ ಮನೆಯಲ್ಲಿ ನಂದೇನೂ ನಡೆಯುವುದಿಲ್ಲ. ಮಗನಿದ್ದಾಗ ಒಂದು ದಾರಿಯಾಯಿತು. ಈಗೊಂದು ದಾರಿ ಆಯಿತು. ಎಲ್ಲಾದರೂ ಹಾಳಾಗಿ ಹೋಗಿ'' ಎಂದವರೇ ಸಿಟ್ಟಿನಿಂದ ಹೊರಗೆ ಹೋದರು.

ಮಾರನೆಯ ದಿನ ಬೆಳಗಿನ ಬಸ್ಸಿಗೆ ರಾಧೆಯನ್ನು ಕರೆದುಕೊಂಡು ಹೋಗಬೇಕೆಂದು ಆ ಪಂಚಾಯಿತಿಯಲ್ಲಿ ನಿರ್ಧಾರವಾಯಿತು. ಜೊತೆಗೆ ರಾಮು ಹೋಗಬೇಕೆಂದೂ ಸೀತಾಬಾಯಿಯವರು ಹೇಳಿದರು. ಇದಕ್ಕೆ ಮೇಷ್ಟರು ಒಪ್ಪಿದರು.

೬

ಬಿದಿರಹಳ್ಳಿ ದೇಸಾಯಿಯವರಿಗೆ ಗೋದೂಬಾಯಿ ಒಂದು ಬಿಡಿಸ ಲಾರದ ಒಗಟಿಯಾದಳು. ಮಾವನ ಮನೆಯಿಂದ ಆಕೆ ಗಂಡನೊಂದಿಗೆ ಹೊರ ಬಿದ್ದಿದ್ದು, ಸವತಿಯನ್ನು ಕರೆಯಿಸಿಕೊಂಡಿದ್ದು ಅವರಿಗೆ ಅರ್ಥವಾಗಲಿಲ್ಲ. ಅಳಿಯ ಶುದ್ಧ ಶುಂಠನೆಂಬುದು ಅವರಿಗೆ ಈ ವೇಳೆಗೆ ತಿಳಿದಿತ್ತು. ಬಣ್ಣ ಮಾತುಗಳನ್ನಾಡಿ ಮಾಧವಾಚಾರಿ ತಮಗೆ ಅನ್ಯಾಯವೆಸಗಿದ್ದು ಅವರಿಗೆ ಖೇದವನ್ನುಂಟುಮಾಡಿತ್ತು. ಒಬ್ಬನೇ ಮಗ, ಆಸ್ತಿಪಾಸ್ತಿಯಿದೆ. ನಿರಾ ಯಾಸವಾಗಿ ಮಗಳು ಯಾವ ತಾಪತ್ರಯವೂ ಇಲ್ಲದೆ ಸಂಸಾರ ತೂಗಿಸಿ ಕೊಂಡು ಹೋಗಬಹುದೆಂದು ಸಮಾಧಾನಮಾಡಿಕೊಂಡಿದ್ದರು. ಆದರೆ ಅವರ ಎಣಿಕೆ ತಪ್ಪಾಯಿತು. ಮಾವನ ಮನೆಯಿಂದ ಮಗಳು ಹೊರಬಿದ್ದಿದ್ದು ಅವರಿಗೆ ಕಳವಳವನ್ನುಂಟುಮಾಡಿತು.

ದೇಸಾಯಿಯವರು ಮೊದಲಿನ ಸ್ಥಿತಿಯಲ್ಲಿದ್ದರೆ ಅಳಿಯ, ಮಗಳನ್ನು ಮನೆಯಲ್ಲಿಯೇ ಇರಿಸಿಕೊಳ್ಳಲು ಸಿದ್ಧರಿದ್ದರು. ಆದರೆ ಅವರ ಸ್ಥಿತಿ ತುಂಬಾ ಕೆಟ್ಟಿದೆ. ಮಳೆ ಇಲ್ಲದೆ ಬೆಳೆ ನಷ್ಟವಾಗಿ ಅವರಿಗೆ ಬರುತ್ತಿದ್ದ ಮುಖ್ಯ ವರ ಮಾನದಲ್ಲಿ ಭಾರಿ ಕಡಿತ ಬಿತ್ತು. ಹೆಣ್ಣುಮಕ್ಕಳು ತಪ್ಪದೆ ಬಾಣಂತಿತನಕ್ಕೆ ವರ್ಷ ವರ್ಷವೂ ಬರುತ್ತಿರುವುದು, ಮನೆಯಲ್ಲಿ ನಿತ್ಯ ದಾಸೋಹ, ಅನ್ನಸತ್ರ ನಡೆಸುವುದು, ಇದರಿಂದ ಅವರು ಸಾಲಗಾರರಾಗಬೇಕಾಯಿತು. ಸಾಲ ತೀರಿಸಲು ಸಾಧ್ಯವಿಲ್ಲದೆ ಹೊಲಗಳನ್ನು ಒಂದೊಂದಾಗಿ ಮಾರಬೇಕಾಯಿತು. ಆದರೂ ಮಗಳಿಗೆ ಕೊಂಚವಾದರೂ ಅವಳ ಆಪತ್ಕಾಲದಲ್ಲಿ ನೆರವಾಗ ಬೇಕೆಂದು ಐನೂರು ರೂಪಾಯಿಗಳನ್ನು ಕಳಿಸಿದರು.

. . . .

ಹೊನ್ನಾಳಿಯಲ್ಲಿ ಇಂದು ಸಂಭ್ರಮವೇ ಸಂಭ್ರಮ. ಪ್ರಾಣೇಶನ ನಿಷೇಕ. ಮೇಷ್ಟರ ಬರುವನ್ನೇ ಜನ ಕಾಯುತ್ತಿತ್ತು. ನ್ಯಾಮತಿ ಕಡೆಯಿಂದ ಯಾವ ಬಸ್ ಬಂದರೂ ಅದನ್ನು ನೋಡುತ್ತಿದ್ದರು. ಮೇಷ್ಟರು ಬರದೆ

ಶುವ ವಿಷಯ ತಿಳಿದು ನಿರಾಶರಾಗುತ್ತಿದ್ದರು. ಸವತಿ ಇರುವ ಮನೆಗೆ ಾಧೆ ಬರಲು ಹಿಂದೇಟು ಹೊಡೆದಿರಬೇಕು. ಅಥವ ಅವಳ ಮನೆಯವರು ವಳನ್ನು ಕಳಿಸಲು ನಿರಾಕರಿಸಿರಬೇಕು, ಮುಂತಾಗಿ ಏನೇನೋ ಲೆಕ್ಕಾ ಾರ ಹಾಕಿಕೊಂಡರು. ಆದರೂ ಅವರಿಗೊಂದು ಧೈರ್ಯವಿತ್ತು. ೀಷ್ಟರು ಎಂದಿಗೂ ಕೆಲಸ ಸಾಧಿಸದೆ ಬಿಡುವವರಲ್ಲ, ಎಂದು ಮಾರನೆ ದಿನ ಂಜೆ ಕೊನೆಯ ಬಸ್ಸಿಗೆ ಮೇಷ್ಟರು ಬಂದರು. ಬಸ್ಸಿನ ಮುಂದುಗಡೆ ೕಟಿನಲ್ಲಿ ಅವರು ಕೂತಿದ್ದರು. ಅವರ ಗೆಲುವಿನ ಮುಖವನ್ನು ನೋಡಿದ ಕೂಡಲೇ ಅವರಿಗೆ ಸಂತೋಷವಾಯಿತು. ರಾಧೆ ಹಿಂದಿನ ಸೀಟಿನಲ್ಲಿ ಕುಳಿತಿದ್ದಳು. ನ್ಯಾಮತಿಯಲ್ಲಿ ತಲೆತಗ್ಗಿಸಿದವಳು ಅದನ್ನು ಮೇಲೆತ್ತಿರಲಿಲ್ಲ. ಅವಳಿಗೆ ಇದ್ಯಾವುದೂ ಅರ್ಥವಾಗಲಿಲ್ಲ. ಸವತಿಯೊಂದಿಗೆ ಹೇಗೆ ನಡೆದು ಕೊಳ್ಳಬೇಕು, ಗಂಡನೊಂದಿಗೆ ಹೇಗೆ ವರ್ತಿಸಬೇಕು, ಇವು ಅವಳ ಮುಂದಿದ್ದ ಪ್ರಶ್ನಾರ್ಥಕ ಚಿಹ್ನೆಗಳು

ಮೇಷ್ಟರು ತನ್ನನ್ನು ಕರೆದುಕೊಂಡುಹೋಗಲು ಬಂದ ವಿಷಯವನ್ನು ರಾಧೆ, ಪದ್ಮಾವತಿಗೆ ತಿಳಿಸಿದ್ದಳು.

"ನಿನಗಾಗಿ ನಾನು ಅದೆಷ್ಟು ದೇವರಿಗೆ ಹರಕೆಗಳನ್ನು ಹೊತ್ತಿದ್ದೇ ನೆಂಬುದು ನಿನಗೇನು ಗೊತ್ತು? ಹೋಗಿ ಸುಖವಾಗಿರಮ್ಮ. ಬಹಳ ಒಳ್ಳೆಯವಳು ನೀನು. ಎಲ್ಲರಿಗೂ ಅಚ್ಚುಮೆಚ್ಚಾಗಿ ಇರುತ್ತೀಯ. ದೇವರು ನಿನಗೆ ಒಳ್ಳೆಯದು ಮಾಡಲಿ." ಪದ್ಮಾವತಿಯ ಕಣ್ಣುಗಳಿಂದ ಆನಂದಬಾಷ್ಪ ಗಳು ಉದುರಿದವು. ಉಯ್ಯಾಲೆ ಆಡುತ್ತಿದ್ದ ರಾಧೆಯ ಮನಸ್ಸು ಸ್ಥಿಮಿತಕ್ಕೆ ಬಂದಿತು.

ಮನೆಯವರೆಲ್ಲರೂ ಬರಬೇಕೆಂದು ಮೇಷ್ಟರು ಆಹ್ವಾನ ಕೊಟ್ಟಿದ್ದರು. "ನಾವೆಲ್ಲಾ ಬರುವುದಕ್ಕೆ ನಮಗೆ ಮುಖವಿಲ್ಲ. ಕೆಲಸ ನಡೆಯಲಿ. ನಾವು ಇಲ್ಲಿಂದಲೇ ಅವರಿಗೆ ಆಶೀರ್ವಾದ ಮಾಡುತ್ತೇವೆ" ಎಂದು ಸೀತಾಬಾಯಿ ಯವರು ಹೇಳಿದರು. ರಮಾಬಾಯಿಯವರ ಬಾಯಲ್ಲಿ ವೆಂಕೋಬಾಚಾರಿ, ಮಾಧವಾಚಾರಿಯವರ ಸಹಸ್ರನಾಮದ ಪ್ರವಾಹ ತಡೆಬಡೆಯಿಲ್ಲದೆ ಸಾಗಿತ್ತು. ರಾಧೆಯ ಜೊತೆಗೆ ರಾಮು ಹೋಗಬೇಕೆಂದು ನಿರ್ಧಾರವಾಗಿತ್ತು. ಈಗ ಬಸ್‌ನಲ್ಲಿ ರಾಮು ಬಂದಿದ್ದ.

"ಸಾಮಾನುಗಳನ್ನೆಲ್ಲಾ ಇಳಿಸಿ"

ಮೇಷ್ಟರನ್ನು ಎದಿರುಗೊಳ್ಳಲು ಬಂದಿದ್ದವರೊಬ್ಬರು ಇನ್ನೊಬ್ಬರಿಗೆ ಆಜ್ಞಾಪಿಸಿದರು. ಸಾಮಾನುಗಳು, ಎಂದರೆ ರಾಧೆಯ ತೆಳ್ಳನೆಯದೊಂದು ಹಾಸಿಗೆ, ಮೇಷ್ಟರದೊಂದು ಕೈಚೀಲ, ರಾಮೂನದೊಂದು ಕೈಚೀಲ.

ರಾಧಾಬಾಯಿ ಮತ್ತು ರಾಮುವನ್ನ ಆ ರಾತ್ರಿ ತಮ್ಮ ಮನೆಯಲ್ಲಿಯೇ ಉಳಿಸಿಕೊಳ್ಳಬೇಕೆಂದು ಮೇಷ್ಟರು ಬಸ್‌ನಲ್ಲಿ ನಿರ್ಧರಿಸಿದ್ದರು.

ಮೆರವಣಿಗೆ ಸಾಗಿತು. ಮೇಷ್ಟರು, ಅವರ ಹಿಂದೆ ರಾಮು, ಅವನ ಹಿಂದೆ ರಾಧಾಬಾಯಿ ಮೇಷ್ಟರನ್ನು ಸ್ವಾಗತಿಸಲು ಬಂದಿದ್ದ ಜನಗಳಲ್ಲಿ ಒಬ್ಬೊಬ್ಬರು ಒಂದೊಂದರಂತೆ ಸಾಮಾನುಗಳನ್ನು ಹಿಡಿದುಕೊಂಡಿದ್ದರು. ಮೇಷ್ಟರ ಹೆಂಡತಿ ಬಾಗಿಲಲ್ಲೇ ನಿಂತಿದ್ದರು ರಾಧೆಯನ್ನು ಕಂಡೊಡನೆ "ಬಾಮ್ಮ ಒಳಕ್ಕೆ ಬಾ" ಎಂದು ನಡುಮನೆಗೆ ಕರೆದುಕೊಂಡುಹೋದರು

"ನೀವೆಲ್ಲಾ ಊಟ ಮುಗಿಸಿಕೊಂಡು ರಾತ್ರಿ ಒಂಬತ್ತರ ಹೊತ್ತಿಗೆ ಬಂದುಬಿಡಿ. ಉಳಿದ ವಿಚಾರಗಳನ್ನೆಲ್ಲ ಮಾತನಾಡೋಣ'' ಎಂದು ಮೇಷ್ಟರು ಹೇಳಿ ಅರಳೀ ಕಟ್ಟೆಯ ಜನಾರ್ಧನ ಕಚೇರಿ ಸದಸ್ಯರುಗಳನ್ನು ಕಳಿಸಿ ಕೊಟ್ಟರು.

ಮೇಷ್ಟರು ಪ್ರಾಣೇಶನಿಗೆ ಹೇಳಿಕಳಿಸಿದರು. ಅವನು ಬರುವ ವೇಳೆಗೆ ಊಟದ ಕಲಾಪ ಮುಗಿದಿತ್ತು. ಪ್ರಾಣೇಶ ಬಂದವನೇ ಮೇಷ್ಟರಿಗೆ ಒಂದು ಶುಭ ಸಮಾಚಾರವನ್ನು ತಿಳಿಸಿದ. ಆ ದಿನ ದೇಸಾಯಿಯವರು ತನ್ನ ಹೆಂಡತಿಯ ಹೆಸರಿಗೆ ಐದು ನೂರು ರೂಪಾಯಿಗಳನ್ನು ಕಳಿಸಿರುವುದಾಗಿಯೂ ಆ ಹಣದಲ್ಲಿ ಕೆಲಭಾಗವನ್ನು ನಿಷೇಕದ ಖರ್ಚಿಗೆ ಬಳಸಲು ಗೋಧೂಬಾಯಿಯೇ ಸೂಚನೆ ಕೊಟ್ಟಿರುವುದಾಗ ತಿಳಿಸಿದ.

"ಹಣಬಂದಿದ್ದು ಒಳ್ಳೇದೆ ಆಯಿತು ಖರ್ಚಿಗೆ ಮತ್ತೆ ಪಟ್ಟಿ ಹಾಕೋಣವೆಂದು ಮಾಡಿದ್ದೆವು ಆ ಹಣದಲ್ಲಿ ಇನ್ನೂರು ರೂಪಾಯಿ ಖರ್ಚು ಮಾಡಬೇಕಾಗುತ್ತದೆ ಎಲ್ಲಕ್ಕೂ ಹೆಚ್ಚಾಗಿ ರಾಧಾಬಾಯಿಗೆ ಒಂದು ಭಾರಿ ಸೀರೆ, ನಿತ್ಯ ಉಟ್ಟುಕೊಳ್ಳಲು ಎರಡು ಸೀರೆಗಳನ್ನು ಕೊಳ್ಳಬೇಕು. ನಾಳೆ ಬೆಳಗಿನ ಮೊದಲನೇ ಬಸ್ಸಿಗೆ ಯಾರನ್ನಾದರೂ ಶಿವಮೊಗ್ಗೆಗೆ ಕಳಿಸಿ ಇವನ್ನು ತರಿಸಬೇಕು'' ಎಂದು ಹೇಳಿದರು.

ಈ ಹೊತ್ತಿಗೆ ಜನಾರ್ಧನ ಕಚೇರಿಯ ಸದಸ್ಯರು ಒಬ್ಬೊಬ್ಬರಾಗಿ ಬರಲಾರಂಭಿಸಿದರು. ನಿಷೇಕದ ಖರ್ಚಿಗೆ ಇನ್ನೂರು ರೂಪಾಯಿ ಒದಗಿದ ಸಮಾಚಾರವನ್ನು ಮೇಷ್ಟರು ತಿಳಿಸಿದರು.

"ವೆಂಕೋಬಾಚಾರಿ ಒಬ್ಬನನ್ನು ಬಿಟ್ಟು ಇಡೀ ಊರಿಗೇ ಔತಣಕ್ಕೆ ಹೇಳೋಣ ಮೇಷ್ಟ್ರೇ'' ಎಂದೊಬ್ಬ ಸದಸ್ಯ ಹೇಳಿದ.

"ನಾವು ಯಾರ ಮೇಲಣ ಜಿದ್ದು ಅಥವಾ ಪ್ರೈಪೋಟಿಯಿಂದ ಈ ಕೆಲಸಕ್ಕೆ ಕೈ ಹಾಕಿಲ್ಲ. ಏನೋ ಕಾರಣದಿಂದ ಒಂದು ಅನ್ಯಾಯ ನಡೆಯಿತು. ಅದನ್ನು ಸರಿಪಡಿಸಲು ಹೊರಟಿದ್ದೇವೆ. ಈಗ ಒಂದು ವಿಷಯವನ್ನು ನಿಮ್ಮೆದುರಿಗೆ ಹೇಳುತ್ತೇನೆ. ನಾನು ಪ್ರಾಣೇಶನನ್ನು ಕರೆದುಕೊಂಡು ಹೋಗಿ, ವೆಂಕೋಬಾಚಾರಿಗೆ ಬರಲು ಹೇಳುತ್ತೇನೆ. ಎಷ್ಟೇ ಆಗಲಿ ಅವನು ಜನ್ಮ ಕೊಟ್ಟ ತಂದೆ. ನಮ್ಮ ಪಾಲಿನ ಕೆಲಸವನ್ನು ನಾವು ಮಾಡೋಣ. ಅವನು ಬರದಿದ್ದರೆ ಮಾತು ಅವನ ಮೇಲೆ ಉಳಿಯುತ್ತದೆ ವಿನಾ ನಮ್ಮ ಮೇಲೆ ಉಳಿಯುವುದಿಲ್ಲ" ಎಂದು ಮೇಷ್ಟರು ಗಂಭೀರವಾಗಿ ಹೇಳಿದರು. ಮೇಷ್ಟರ ಸೂಚನೆ ಸದಸ್ಯವೃಂದಕ್ಕೆ ರುಚಿಸಲಿಲ್ಲ ಆದರೂ ಅವರ ಸೂಚನೆಗೆ ಪ್ರತಿಹೇಳಲು ಯಾರಿಗೂ ಇಷ್ಟವಿರಲಿಲ್ಲ.

ರಾಮಾಚಾರಿ ಪಂಚಾಂಗವನ್ನು ತೆಗೆದುಕೊಂಡು ಬಂದಿದ್ದ ನಾಡಿದ್ದು ಮುಹೂರ್ತವಿದೆಯೆಂದು ಹೇಳಿದ. ಮೊದಲೇ ಯೋಚಿಸಿದ್ದಂತೆ ಕೇವಲ ಒಂದು ಹಬ್ಬದಂತೆ ಈ ಕೆಲಸವನ್ನು ನೆರವೇರಿಸಬೇಕೆಂದು ನಿಶ್ಚಿತವಾಯಿತು. ಉಳಿದೆಲ್ಲ ಏರ್ಪಾಟುಗಳನ್ನು ಮಾಡಲು ಒಬ್ಬೊಬ್ಬರು ಒಂದೊಂದು ಕೆಲಸವನ್ನು ವಹಿಸಿಕೊಂಡರು.

ಮಾರನೆ ದಿನ ಪ್ರಾಣೇಶನನ್ನು ಕರೆದುಕೊಂಡು ಮೇಷ್ಟರು ವೆಂಕೋಬಾಚಾರಿಯ ಮನೆಗೆ ಹೋದರು. ಈ ಹೊತ್ತಿಗೆ ಆಚಾರಿಗೆ ಕರ್ಣಾಕರ್ಣಿಯಾಗಿ ಎಲ್ಲ ವಿಚಾರಗಳೂ ತಿಳಿದಿದ್ದವು. ಮೇಷ್ಟರು ನ್ಯಾಮತಿಗೆ ಹೋಗಿ ರಾಧೆಯನ್ನು ಕರೆದುಕೊಂಡು ಬಂದದ್ದು, ನಾಳೆ ನಿಷೇಕದ ಮುಹೂರ್ತ ಇಟ್ಟಿದ್ದು ಗೊತ್ತಾಗಿತ್ತು ಮೇಷ್ಟರು ಪ್ರಾಣೇಶನನ್ನು ಕರೆದುಕೊಂಡು ಬರುತ್ತಿರುವಾಗ ವೆಂಕೋಬಾಚಾರಿ ತನ್ನ ಮನೆಯ ಕಟ್ಟೆಯ ಮೇಲೆ ಕೂತಿದ್ದ. ಅವರು ಕಟ್ಟೆಯ ಮೆಟ್ಟಿಲ ಬಳಿ ಬಂದಾಗ ಆಚಾರಿ ದಿಗ್ಗನೆ ಎದ್ದ. ಪ್ರಾಣೇಶನನ್ನು

ಮೇಷ್ಟರು ಯಾವ ಉದ್ದಿಶ್ಯದಿಂದ ಕರೆದುಕೊಂಡು ಬಂದಿದ್ದರೆಂಬುದನ್ನೂ ಊಹಿಸಿದ. ಯಾವ ಮಾತನ್ನೂ ಆಡದೆ ಒಳಕ್ಕೆ ಹೋಗಿ ಧಡಾರನೆ ಮುಂಬಾಗಿಲನ್ನು ಹಾಕಿದ. ತಾವು ಬಂದ ಕೆಲಸ ಮುಗಿಯಿತೆಂದು ಮೇಷ್ಟರು, ಪ್ರಾಣೇಶನನ್ನು ಕರೆದುಕೊಂಡು, ಬಂದ ದಾರಿಗೆ ಸುಂಕವಿಲ್ಲದೆ ಮನೆ ಕಡೆ ತೆರಳಿದರು.

೧೦

ಪ್ರಾಣೇಶನ ನಿಷೇಧದ ಕಲಾಪ ಮುಗಿಯಿತು. ಊರಿನವರೆಲ್ಲ ಅವನಿಗೂ, ರಾಧಾಬಾಯಿಗೂ ಉಡುಗೊರೆಗಳನ್ನು ಓದಿಸಿದರು. ಪ್ರಾಣೇಶನ ಮೇಲಿನ ಅಭಿಮಾನಕ್ಕಿಂತ ನೊಂದ ಹುಡುಗಿ ರಾಧಾಬಾಯಿಗೆ ಅನುಕೂಲವಾಗಲೆಂಬುದೇ ಅವರ ಹಿರಿಯಾಸೆ. ಮೇಷ್ಟರ ಸಾಹಸಕ್ಕೆ ಎಲ್ಲರೂ ಬೆರಗಾದರು. ಅವರಿಗೆ ಅಭಿನಂದನೆಯ ಸುರಿಮಳೆಯನ್ನು ಸುರಿಸಿದರು.

ಇಬ್ಬರು ಹೆಂಡತಿಯರ ಸಂಸಾರವನ್ನು ಹೇಗೆ ಸಾಗಿಸಬೇಕೆಂದು ಆಲೋಚಿಸಿದ್ದ ಪ್ರಾಣೇಶನಿಗೆ ಅದು ಅಷ್ಟು ಕಠಿಣವಾಗಿ ತೋರಲಿಲ್ಲ. ಇಬ್ಬರೂ ಅಕ್ಕತಂಗಿಯರಂತೆ ವರ್ತಿಸುತ್ತಿದ್ದರು. ಸಂಸಾರ ನಿರ್ವಹಣೆ ಸುಸೂತ್ರವಾಗಲು ಇಬ್ಬರೂ ಶ್ರಮಿಸುತ್ತಿದ್ದರು. ಈ ಮಧ್ಯೆ ದೇಸಾಯಿಯವರು ಒಂದು ಬಾರಿ ಹೊನ್ನಾಳಿಗೆ ಬಂದು ಈ ವಿಚಿತ್ರ ಸಂಸಾರವನ್ನು ನೋಡಿ ಬೆಕ್ಕಸ ಬೆರಗಾಗಿದ್ದರು. ದೇಸಾಯಿಯವರು ಊರಿಗೆ ಬಂದ ವರ್ತಮಾನವನ್ನು ಕೇಳಿ ಮಾಧವಾಚಾರಿ ತಲೆಮರೆಸಿಕೊಂಡಿದ್ದ. ವೆಂಕೋಬಾಚಾರಿಯ ಮನೆಗೂ ದೇಸಾಯಿಯವರು ಹೋಗಿದ್ದರು ತಂದೆ ಮಕ್ಕಳನ್ನು ಒಂದಾಗಿಸಬೇಕೆಂಬುದೇ ಅವರ ಇಚ್ಛೆಯಾಗಿತ್ತು.

"ಈ ಎಲ್ಲ ಅನರ್ಥಗಳಿಗೆ ನಿಮ್ಮ ಮಗಳೇ ಕಾರಣ. ಅರಿಯದ ಹುಡುಗನಿಗೆ ಇಲ್ಲದ ದುರ್ಬೋಧನೆ ಮಾಡಿ, ಬೇರೆ ಸಂಸಾರ ಹೂಡಿದಳು. ಸವತಿಯನ್ನು ಮನೆಗೆ ಕರೆದುಕೊಂಡಳು.'' ವೆಂಕೋಬಾಚಾರಿ ಹಳೆಯ ಪಲ್ಲವಿಯನ್ನು ಹಾಡಿದ.

"ಆದದ್ದು ಆಗಿಹೋಯಿತು. ಹಳೆಯ ಹಾದರವನ್ನು ನೆನೆದು ಹಿತ್ತಲಲ್ಲಿ ಅತ್ತರು ಅನ್ನುವಂತೆ ಆ ಹಳೆ ಕಥೆಯನ್ನು ಕಟ್ಟಿಕೊಂಡು ಏನು ಮಾಡುವುದು. ನಿಮಗೂ ವೃದ್ಧಾಪ್ಯ, ನಿಮ್ಮ ಕುಟುಂಬ ಹಾಸಿಗೆ ಹಿಡಿದಿದ್ದಾರೆ. ಲಕ್ಷಣವಾಗಿ ಮಗ, ಸೊಸೆಯರನ್ನು ಕರೆಸಿಕೊಂಡು ಸುಖವಾಗಿರಿ'' ದೇಸಾಯಿಯವರು ಹೇಳಿದರು.

"ನನಗೇಕೆ ಬುದ್ಧಿವಾದ ಹೇಳುತ್ತೀರಿ ದೇಸಾಯಿಯವರೇ, ನಿಮ್ಮ ಮಗಳಿಗೆ ಹೇಳಿ...." ಎಂದು ವೆಂಕೋಬಾಚಾರಿ ಆರಂಭಿಸುತ್ತಲೇ ಈ ಮೂರ್ಖ ಮನುಷ್ಯನಿಂದ ಏನೂ ಪ್ರಯೋಜನ ಆಗುವದಿಲ್ಲವೆಂದು ದೇಸಾಯಿಯವರು ಹೊರಟರು.

. . . .

ವೆಂಕೂಬಾಯಿಯವರು ಮಲಗಿದ್ದವರು ಹಾಗೇ ದೀರ್ಘ ನಿದ್ರೆ ಹೋದರು. ಅವರು ಬದುಕುವರೆಂಬ ಆಸೆ ಯಾರಿಗೂ ಇಲ್ಲದಿದ್ದರೂ ಇಷ್ಟು ಜಾಗ್ರತೆಯಾಗಿ ಸಾಯುವರೆಂದು ಯಾರೂ ನಿರೀಕ್ಷಿಸಿರಲಿಲ್ಲ. ಮಿಂಚಿನ ವೇಗದಲ್ಲಿ ಈ ಸುದ್ದಿ ಹರಡಿತು.

ಹೊನ್ನಾಳಿ ಈ ಒಂದು ವಿಚಾರದಲ್ಲಿ ಎಲ್ಲ ಊರುಗಳಿಗೂ ಆದರ್ಶವಾಗಿದೆ. ಸಾಮಾನ್ಯವಾಗಿ ಬ್ರಾಹ್ಮಣರಲ್ಲಿ ಹೆಣ ಬಿದ್ದರೆ ಅದನ್ನು ಎತ್ತಿ ಹಾಕುವುದು ಕಷ್ಟಸಾಧ್ಯ. ಆದರೆ ಹೊನ್ನಾಳಿಯಲ್ಲಿ ಈ ತಾಪತ್ರಯವಿಲ್ಲ. ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ನಾಮುಂದು ತಾಮುಂದು ಎಂದು ಜನ ಬರುತ್ತಾರೆ. ಈ ವರ್ತಮಾನ ಮೇಷ್ಟರ ಕಿವಿಗೆ ಬಿದ್ದೊಡನೆ ಅವರು ನೇರವಾಗಿ ಪ್ರಾಣೇಶನ ಮನೆಗೆ ಹೋದರು. ಅವನಿಗೆ ವಿಷಯ ತಿಳಿಸಿದರು. ಸೊಸೆಯರಿಬ್ಬರೂ ಕಣ್ಣಿಗೆ ಸೀರೆಯ ಸೆರಗನ್ನು ಹಚ್ಚಿದರು. ಗೋಧೂಬಾಯಿಗೆ ನಿಜಕ್ಕೂ ದುಃಖವಾಯಿತು. ತಾಯಿಯನ್ನು ಮರೆಯಿಸಿದ ಚಿನ್ನದಂಥಾ ಅತ್ತೆಯನ್ನು ನೆನೆದು ಅತ್ತಳು. ವೆಂಕೂಬಾಯಿಯವರು ಬಹು ಒಳ್ಳೆಯವರೆಂದು ರಾಧಾಬಾಯಿಗೆ ಕರ್ಣಾಕರ್ಣಿಯಾಗಿ ಗೊತ್ತಾಗಿತ್ತು. ಅಂಥಾ ಅತ್ತೆಯೊಂದಿಗೆ ತಾನು ಸಂಸಾರ ಮಾಡಲು ಅವಕಾಶ ಸಿಗಲಿಲ್ಲವಲ್ಲಾ ಎಂದು ಆಕೆ ದುಃಖಿಸಿದಳು.

"ಅಲ್ಲಿಗೆ ಹೋದರೆ ಅಪ್ಪ ಏನನ್ನುತ್ತಾನೋ ?"

"ನಾವು ಮಾಡುವ ಕರ್ತವ್ಯವನ್ನು ನಾವು ಮಾಡಬೇಕು. ವೆಂಕೂಬಾಯಿಯವರ ಅಂತ್ಯ ಸಂಸ್ಕಾರವನ್ನು ನೀನಲ್ಲದೆ ಇನ್ನಾರು ಮಾಡಬೇಕು."

ಮೇಷ್ಟರು, ಪ್ರಾಣೇಶ, ರಾಧಾಬಾಯಿ ಮತ್ತು ಗೋಧೂಬಾಯಿ ವೆಂಕೋಬಾಚಾರಿಯ ಮನೆಗೆ ಹೋದರು. ಈ ಹೊತ್ತಿಗಾಗಲೇ ಹತ್ತಿಪ್ಪತ್ತು ಜನ ಗಂಡಸರು ಹೆಂಗಸರು ಅವರ ಜಗಲಿಯಮೇಲೆ ನಿಂತಿದ್ದರು.

ವೆಂಕೂಬಾಯಿಯವರ ಅಂತ್ಯದರ್ಶನ ಪಡೆಯಲು ಅನೇಕರು ಹೋಗಿ ಬರುತ್ತಿದ್ದರು. ವೆಂಕೋಬಾಚಾರಿ ಜಗಲಿಯ ಮೂಲೆಯಲ್ಲಿ ಕೂತಿದ್ದ. ಅವನ ಮುಖದ ಮೇಲೆ ಯಾವ ಹಾವ ಭಾವಗಳೂ ಇರಲಿಲ್ಲ. ಅವರಿವರು ಬಂದು ಅವನಿಗೆ ಶುಷ್ಕ ಸಮಾಧಾನವನ್ನು ಹೇಳುತ್ತಿದ್ದರು. ''ಆಕೆ ಇಷ್ಟು ಜಾಗ್ರತೆಯಾಗಿ ಕಾಲವಾಗುತ್ತಾಳೆಂದು ನಾವು ತಿಳಿದಿರಲಿಲ್ಲ ಪುಣ್ಯವಂತೆ, ಜಾಗ್ರತೆ ಹೋದಳು'' ಎಂದು ಜನ ಆಡಿಕೊಳ್ಳುತ್ತಿದ್ದರು

ಮಗ ಸೊಸೆಯರು ಬಂದಿದ್ದನ್ನು ವೆಂಕೋಬಾಚಾರಿ ನೋಡಿದ. ತೋಷ್ಕರು ಬಂದಿದ್ದನ್ನೂ ನೋಡಿದ. ಇನ್ನು ಎಂದಿನಂತೆ ತಾನು ಹಟ ಮಾಡಿದರೆ ಚೆನ್ನಾಗಿರುವುದಿಲ್ಲವೆಂದು ಅವನಿಗೆ ಗೊತ್ತಿತ್ತು. ಮಗನೊಂದಿಗಾಗಲಿ, ಸೊಸೆಯರೊಂದಿಗಾಗಲೀ ಅವನು ಒಂದು ಮಾತನ್ನೂ ಆಡಲಿಲ್ಲ. ದಹನಯಾತ್ರೆ ಮತ್ತು ಉಳಿದ ಅಂತ್ಯ ಸಂಸ್ಕಾರಾದಿಗಳು ಹದಿಮೂರು ದಿನಗಳವರೆಗೆ ನಡೆದವು. ಈ ಒಂದು ಕಾರಣದಿಂದಲಾದರೂ ತಂದೆ ಮಗ ಸೇರಬಹುದೆಂದು ಜನ ನಂಬಿದ್ದರು. ಆದರೆ ವೆಂಕೋಬಾಚಾರಿ ತನ್ನ ಹಟ ಬಿಡಲಿಲ್ಲ. ತಾನೊಬ್ಬನೇ ಇರುವುದಾಗಿಯೂ, ಇನ್ನಾರ ಗೊಡವೆಯೂ ತನಗೆ ಬೇಡವೆಂದೂ ಹೇಳಿಬಿಟ್ಟ.

೧೧

"ಎಷ್ಟು ಮುದ್ದಾಗಿವೆ ಈ ಮಕ್ಕಳು. ಇವನ್ನು ನೋಡಿ ಸಂತೋಷ ಪಡುವ ಭಾಗ್ಯ ಅವರ ಅಜ್ಜಿಗೆ ಇಲ್ಲದಾಯಿತು.'' ರಮಾಬಾಯಿಯವರು ರಾಧೆಯ ಎರಡು ಮಕ್ಕಳನ್ನು ನೋಡಿ ಹೇಳಿದರು. ರಾಧಾಬಾಯಿ ನಿಷೇಕ ವಾಗಿ ಒಂದು ವರ್ಷ ತುಂಬುವದರೊಳಗೆ ಒಂದು ಗಂಡು ಮಗುವನ್ನು ಹೆತ್ತಳು. ಮತ್ತೆ ಮೂರು ವರ್ಷಕ್ಕೆ ಒಂದು ಹೆಣ್ಣುಮಗುವನ್ನು ಹೆತ್ತಳು. ಸ್ಯಾಮತಿಯಲ್ಲಿ ಅನಾನುಕೂಲವಿದ್ದುದರಿಂದ ಈ ಎರಡು ಬಾಣಂತಿತನಗಳೂ ಹೊನ್ನಾಳಿಯಲ್ಲೇ ಸಾಗಿದ್ದವು. ಗೋಧೂಬಾಯಿಯೇ ಈ ಬಾಣಂತಿತನಗಳನ್ನು ಮಾಡಿದ್ದಳು.

ಇದೀಗ ರಾಧಾಬಾಯಿ ಮಕ್ಕಳೊಂದಿಗೆ ತವರೂರಿಗೆ ಬಂದಿದ್ದಾಳೆ. ಸೀತಾಬಾಯಿಯವರಿಗಂತೂ ಸ್ವರ್ಗ ಒಂದು ಗೇಣು ಮಾತ್ರ ಉಳಿದಿತ್ತು. "ಬಸ್‌ನಲ್ಲಿ ಬರುವಾಗ ಯಾರದಾದರೂ ದೃಷ್ಟಿ ತಾಕಿದ್ದರೂ ತಾಕಿರಬಹುದು" ಎಂದು ಹೇಳುತ್ತ ರಮಾಬಾಯಿಯವರು ಎರಡು ಪೊರಕೆಗಳನ್ನು ಸುಟ್ಟು ಹಾಕಿದ್ದರು.

"ಮೇಷ್ಟರಂಥ ಪುಣ್ಯಾತ್ಮರು ಈ ಭೂಮಿಯ ಮೇಲೆ ಇನ್ನೂ ಇರುವದ ರಿಂದಲೇ ಮಳೆ ಬೆಳೆಗಳಾಗುತ್ತಿರುವುದು. ಮಾಧವಾಚಾರಿ, ವೆಂಕೋಬಾ ಚಾರಿಯಂಥ ಪ್ಲೇಗಿನಂಥ ಜನರು ಈ ಭೂಮಿತಾಯಿಗೆ ಭಾರ'' ಎಂದು ರಮಾಬಾಯಿಯವರು ಮಕ್ಕಳನ್ನು ನೆರೆಹೊರೆಯವರಿಗೆ ತೋರಿಸಲು ಕರೆದು ಕೊಂಡು ಹೋದರು.

ರಾಮು ಈಗ ಹೆಸರಾಂತ ಶಾನುಭೋಗ. ಹೆಚ್. ಎಸ್. ಲೆಕ್ಕಗಳು ಬಂದ ಮೇಲೆ ಅವನಿಗೆ ಶುಕ್ರಮಹರ್ದೆಶೆ ತಿರುಗಿತು. ಬೇಡವೆಂದರೂ ಹಣ ಬರುತ್ತಿದ್ದಿತು. ಜೋಳ, ರಾಗಿ, ಮೆಣಸಿನಕಾಯಿ ಮುಂತಾದವುಗಳಿಗೂ ತಾಪತ್ರಯವಿಲ್ಲ. ಪತ್ರಗಳನ್ನು ಬರೆಯುವುದು, ಶಿವಮೊಗ್ಗಿಯ ಕೋರ್ಟಿಗೆ ಓಡಿಯಾಡುವುದು ಮುಂತಾದ ಕೆಲಸಗಳನ್ನು ಮಾಡುತ್ತ ಅವನೊಬ್ಬ ಫೂಟ್

ಲಾಯರಾಗಿದ್ದಾನೆ. ರಮಾಬಾಯಿಯವರಿಗೆ ವಯಸ್ಸಾದ್ದರಿಂದ ಊರಿನ "ಮಿಡ್ ವೈಫ್" ಮತ್ತು "ಲೆಡಿ ಡಾಕ್ಟರ್" ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದಾರೆ. ಮನೆಯಲ್ಲಿ ಮೊದಲಿನ ತಾಪತ್ರಯವಿಲ್ಲ. ಹೆಚ್ಚು ಸಿರಿವಂತಿಗೆಯ ಲಕ್ಷಣಗಳಿಲ್ಲದಿದ್ದರೂ, ಎರಡು ಹೊತ್ತಿನ ಗ್ರಾಸಕ್ಕೆ ಯಾವ ಚ್ಯುತಿಯೂ ಇಲ್ಲ.

ಗೋಧೂಬಾಯಿಯನ್ನು ಕಂಡು ಹೊನ್ನಾಳಿ ಜನ ಅಚ್ಚರಿಗೊಂಡರೆ, ನ್ಯಾಮತಿ ಜನ ಆಕೆಯನ್ನು ಮನಸಾರೆ ಹೊಗಳಿದರು. "ಕಲಿಗಾಲದಲ್ಲಿಯೂ ಇಂಥ ಪವಾಡಗಳು ನಡೆಯುವುದೇ" ಎಂದು ಮೂಗಿನ ಮೇಲೆ ಬೆರಳಿಟ್ಟರು

"ಮಾವನವರೊಬ್ಬರು ಕೈ ಬಾಯಿ ಸುಟ್ಟುಕೊಂಡು, ಒಬ್ಬರೇ ಅಡಿಗೆ ಮಾಡಿಕೊಂಡು ದಿನ ನೂಕುತ್ತಿದ್ದಾರೆ. ಅವರೊಬ್ಬರು ಮನೆಗೆ ಬಂದರೆ ಎಷ್ಟು ಚೆನ್ನಾಗಿರುತ್ತದೆ" ರಾಧಾಬಾಯಿ ತನ್ನ ತಾಯಿಗೆ ಹೇಳಿದಳು. ರಮಾಬಾಯಿಯವರು ಮಧ್ಯೆ ಬಾಯಿಹಾಕಿ "ನಿಮ್ಮ ಮಾವನ ತಲೆ ಬೋಳಿಸಿತು. ಅವನೊಬ್ಬ ಭಂಡ, ನಿನ್ನ ತಲೆಯ ಮೇಲೆ ಎಂಥ ಕಲ್ಲು ಎಳೆದಿದ್ದ. ಏನೋ ದೇವರ ದಯದಿಂದ ಎಲ್ಲಾ ಸರಿಹೋಯಿತು. ಇಲ್ಲದಿದ್ದರೆ ಈ ನ್ಯಾಮತಿಯಲ್ಲಿ ನೀನು ಸಾಯುವವರೆಗೂ ಕೊಳೆಯಬೇಕಾಗಿತ್ತು" ಎಂದು ಹೇಳಿದರು.

"ಏನೋ ಒಂದು ವಿಷಗಳಿಗೆ, ಅವರು ಹಾಗೆ ಮಾಡಿದರು. ಆದರೆ ಅದನ್ನೇ ಹಚ್ಚಿಕೊಂಡು ಹಟ ತೊಟ್ಟರೆ ಹೇಗೆ?" ರಾಧಾಬಾಯಿ ಹೇಳಿದಳು.

"ಇನ್ನು ಅವನು ನಿಮ್ಮ ಮನೆಗೆ ಬಂದರಾಗಲೀ, ಅಥವಾ ಅವನ ಮನೆಗೆ ನೀವು ಹೋದರಾಗಲೀ, ಏನಾದರೂ ಅನರ್ಥ ಸಂಭವಿಸುವುದು ಖಂಡಿತ. ಆ ಚೇತನವೇ ಅಂಥಾದ್ದು. ಕೌರವೇಶ್ವರನ ಹಟ, ವೆಂಕೋಬಾಚಾರಿಯ ಹಟಕ್ಕೆ ಒಂದು ಸುತ್ತು ಕಡಿಮೆಯೆಂದೇ ಹೇಳಬೇಕು.........." ಎಂದು ರಮಾಬಾಯಿಯವರು ಹೇಳುತ್ತಿದ್ದಾಗ, ಸೀತಾಬಾಯಿಯವರು ಅಡ್ಡ ಬಂದು, "ಇಲ್ಲದ ತರ್ಕ ಯಾತಕ್ಕೆ, ವೆಂಕೋಬಾಚಾರ್ಯರು ಹೇಗೂ ಒಬ್ಬರೇ ಇರಲು ಬಯಸುತ್ತಾರೆ, ನೀವೇಕೆ ಸುಮ್ಮನೆ ಚರ್ಚೆ ಮಾಡುತ್ತೀರಿ" ಎಂದು ಬೇರೆ ಮಾತಿಗಾರಂಭಿಸಿದರು.

# ೧೨

"ಏನು ಆಚಾರ್ರೇ ಮೊಮ್ಮಕ್ಕಳನ್ನು ಆಡಿಸಲು ಹೊರಟಿದ್ದೀರೇನು ?"

"ಹೆಂಗಸರು ಮನೆಗೆಲಸ ಮಾಡಲು ಸ್ವಲ್ಪವೂ ಪುರಸೊತ್ತು ಕೊಡುವು ದಿಲ್ಲ. ಅಗೋ, ಇವನಿದ್ದಾನಲ್ಲ ಭೀಮ, ಸಾಕ್ಷಾತ್ ಭೀಮನೇ. ಎಂಥಾ ತುಂಟನಿದ್ದಾನೆಂದು ತಿಳಿದಿದ್ದೀರಿ ? ಮೊನ್ನೆ ಒಂದು ಕೊಳಗ ನೀರನ್ನು "ಡಬ್" ಅನಿಸಿದ. ಇವಳಿದ್ದಾಳಲ್ಲ ತುಂಗಿ, ನೋಡುವುದಕ್ಕೆ ಹಾಗಿದ್ದಾಳೆ. ಎಷ್ಟು ಗಲಾಟೆ ಮಾಡ್ತಾಳೆ ಅಂತೀರ................"

ವೆಂಕೋಬಾಚಾರಿಗೆ ಬೆಳಗಿನಿಂದ ಹಿಡಿದು ಸಂಜೆಯವರಿಗೆ ಮೊಮ್ಮಕ್ಕಳನ್ನು ಆಡಿಸುವುದೇ ಒಂದು ದೊಡ್ಡ ಕೆಲಸ ತನ್ನ ಹೇಡಿ ತೀರಿಕೊಂಡ ಮೇಲೆ ಆರು ತಿಂಗಳು ಆ ಮನೆಯಲ್ಲೇ ಇದ್ದ. ಕಾರ್ತೀಕ ಮಾಸದಲ್ಲಿ ಒಂದು ದಿನ ನದಿಯಿಂದ ಸ್ನಾನ ಮಾಡಿ ಕೊಂಡು ಚಳಿ ಚಳಿ ಆಗುತ್ತದೆಂದು ಮಲಗಿದ. ಜ್ವರ ಹತ್ತಿತು. ತಲೆ ಸಿಡಿಯಲಾರಂಭಿಸಿತು. ಒಂದು ತೊಟ್ಟು ಗಂಜಿ ಮಾಡಿಕೊಡಲು ಯಾರೂ ದಿಕ್ಕಿಲ್ಲ. ಆಚಾರಿಗೆ ತನ್ನ ಅಸಹಾಯಕತೆಯ ಅರಿವಾಯಿತು. ತನ್ನಲ್ಲಿದ್ದ ಹಣದಿಂದ ತನಗಾವ ಪ್ರಯೋಜನವೂ ಆಗುವದಿಲ್ಲವೆಂದು ಆತ ಮನಗಂಡ. ಆಚಾರಿ ಕಾಯಿಲೆ ಬಿದ್ದಿದ್ದಾನೆಂದು ಊರಿನವರಿಗೆ ತಿಳಿದಿದ್ದರೂ ಅವನನ್ನು ಮಾತನಾಡಿಸಿಕೊಂಡು ಹೋಗಲು ಯಾರೂ ಬರಲಿಲ್ಲ.

ವೆಂಕೋಬಾಚಾರಿ ಕಾಯಿಲೆ ಬಿದ್ದ ಸಮಾಚಾರ ಪ್ರಾಣೇಶನಿಗೆ ತಿಳಿಯಿತು. ತಂದೆಯ ಗುಣವನ್ನು ಅರಿತ ಮಗ ಸುಮ್ಮನಾದ. "ಮಾವ ನವರನ್ನು ನೋಡಿಕೊಂಡು ಬರೋಣ" ಎಂದು ಹೆಂಡತಿಯರಿಬ್ಬರೂ ಹೇಳಿದರು.

"ಸುಮ್ಮನೇ ಹೋಗಿ ಛೀಮಾರಿ ಮಾಡಿಸಿಕೊಂಡು ಬರಲು ಏನಾ ದರೂ ಹರಕೆ ಹೊತ್ತಿರುವರೇನು ?" ಅಂತ ಪ್ರಾಣೇಶ ಅವರನ್ನು ಸುಮ್ಮನಾಗಿಸಿದ.

ಪ್ರಾಣೇಶನ ಮನೆಗೆ ಸಂಜೆ ಮೇಷ್ಟರು ಬಂದು ವೆಂಕೋಬಾಚಾರಿಯ ಕಾಯಿಲೆ ಪ್ರಸ್ತಾಪವೆತ್ತಿದರು.

"ಹೌದು ಮೇಷ್ಟ್ರೆ, ನನಗೂ ಈ ವಿಷಯ ತಿಳಿಯಿತು. ಆದರೆ ಅಪ್ಪ ಹಾಗೆಲ್ಲಾ ದಾರಿಗೆ ಬರುವವನಲ್ಲ. ಅವನ ಹಟವೇ ಹಟ"

"ನಮ್ಮ ಕರ್ತವ್ಯದಲ್ಲಿ ಚ್ಯುತಿ ಇರಬಾರದು ಹೋಗಿ ಕೇಳೋಣ, ಅವನೇನು ಹೇಳುತ್ತಾನೋ ನೋಡೋಣ. ನಿನ್ನ ಹೆಂಡತಿಯರೇನು ಹೇಳಿದರು?"

"ಅಪ್ಪನನ್ನು ಕರೆದುಕೊಂಡು ಬರಲು ಅವರೇ ಇವೊತ್ತು ಸೂಚಿಸಿದರು. ಅಪ್ಪನ ಕೈಲಿ ವಿನಾಕಾರಣ ಯಾಕೆ ಬೈಸಿಕೊಳ್ಳಬೇಕೆಂದು ಸುಮ್ಮನಾದೆ"

ಪ್ರಾಣೇಶ ಮತ್ತು ಮೇಷ್ಟರು ವೆಂಕೋಬಾಚಾರಿಯ ಮನೆಗೆ ಹೋದರು. ವೆಂಕೂಬಾಯಿಯವರು ಮಲಗಿದ್ದ ಕೋಣೆಯಲ್ಲಿ ಆಚಾರಿ ಮಲಗಿದ್ದ. ಅವನು ಆಹಾರ ಕಾಣದೆ ಮೂರು ದಿನಗಳಾಗಿತ್ತು.

"ನಿಮಗೆ ಕಾಯಿಲೆ ಆಗಿದೆ ಎಂತ ಹೇಳಿದರು. ನೋಡಲು ಬಂದೆವು." ಮೇಷ್ಟರೇ ಮೊದಲು ಮಾತಿಗಾರಂಭಿಸಿದರು. ವೆಂಕೋಬಾಚಾರಿ ಉಸಿರೆತ್ತಲಿಲ್ಲ.

"ಅಪ್ಪಾ, ಈಗ ಹೇಗಿದೆ?" ಪ್ರಾಣೇಶ ಕೇಳಿದ.

ವೆಂಕೋಬಾಚಾರಿ ಮುಖವನ್ನತ್ತ ತಿರುಗಿಸಿದ. ತಾನು ಎಷ್ಟು ಹಟ ಸಾಧಿಸಿದರೂ, ಈ ಜನರು ಅದನ್ನೆಲ್ಲಾ ಮರೆತು ಸೌಜನ್ಯದಿಂದ ವರ್ತಿಸಿದ್ದನ್ನು ನೋಡಿ ಅವನ ಮನಸ್ಸು ಕರಗಿತು. ಯಾವಾಗಲೂ ಜನರಲ್ಲಿ ದೋಷ ಎಣಿಸುತ್ತಿದ್ದ ವೆಂಕೋಬಾಚಾರಿಗೆ ಒಳ್ಳೆಯ ಜನರೂ ಈ ಭೂಲೋಕದಲ್ಲಿ ಇದ್ದಾರೆಂಬ ಅರಿವಾಯಿತು ಆದರೂ ಅದನ್ನು ಬಹಿರಂಗವಾಗಿ ಹೇಳಲು ಬಿಗುಮಾನ ಬೇರೆ ಬಾಧಿಸುತ್ತಿತ್ತು.

"ಆದದ್ದು ಆಗಿಹೋಯಿತು. ಹಿಂದಿನ ಕಥೆಯನ್ನೆಲ್ಲಾ ಮರೆತುಬಿಡಿ ಆಗುವುದೆಲ್ಲಾ ಒಳ್ಳೆಯದಕ್ಕೇ ಎಂದು ತಿಳಿಯೋಣ. ಮುತ್ತಿನಂಥ ಸೊಸೆಯರು, ಚಿನ್ನದಂಥ ಮೊಮ್ಮಕ್ಕಳು ಹಾಲಿನಂಥಾ ಈ ಸಂಸಾರವನ್ನು ಬಿಟ್ಟು ಒಂಟಿಯಾಗಿ ಇರಲು ಹೇಗೆ ನಿಮ್ಮ ಮನಸ್ಸು ಒಪ್ಪು

ತ್ತಿದೆಯೋ ನನಗೆ ಗೊತ್ತಿಲ್ಲ. ಏನಾದರೂ, ಎಲ್ಲಿಯಾದರೂ ತಪ್ಪಾಗಿದ್ದರೆ ಅದನ್ನು ಸರಿಪಡಿಸುವ ಜವಾಬ್ದಾರಿ ನಿಮ್ಮದು. ಉದಾರ ಮನಸ್ಸಿನಿಂದ ಎಲ್ಲರನ್ನೂ ನೀವು ಕ್ಷಮಿಸಬೇಕು ''

''ಪ್ರಾಣೇಶ ಒಂದು ಪಕ್ಷ ಕಡಿಮೆಯಾದವನು, ಅವನಿಗೆ ಅನುಕೂಲ ವಾಗಲೆಂದು ಏನೇನೋ ಮಾಡಿದೆ. ಆದರೆ ದೈವಚಿತ್ತಕ್ಕೆ ಯಾವುದೂ ಬರಲಿಲ್ಲ. ನಾನು ಮುದುಕ ನನಗೆ ಆಗಬೇಕಾಗಿರುವದಾದರೂ ಏನು ? ಏನೋ, ಈಗಿನ ಕಾಲದ ಹುಡುಗರಿಗೆ ಒಂದೂ ತಿಳಿಯುವದಿಲ್ಲ.........''

"ಈಗ ಯಾವ ಏರ್ಪಾಟು ಮಾಡೋಣ ನೀವೇ ಹೇಳಿ. ಪ್ರಾಣೇಶನ ಮನೆಗೆ ನೀವು ಹೋಗುತ್ತೀರೋ ಅಥವಾ ಅವನ ಸಂಸಾರವೆಲ್ಲ ಇಲ್ಲಿಗೇ ಬರಲೋ ?"

"ಅವರೆಲ್ಲಾ ಇಲ್ಲೇ ಬಂದುಬಿಡಲಿ. ಏನೋ ದೇವರು ಕೊಟ್ಟಿದ್ದು ಇದೆ. ಪ್ರಾಣೇಶ ಅಷ್ಟು ಹೆಚ್ಚು ಜವಾಬ್ದಾರಿ ಹೊರಲಾರ.''

ಮಾರನೆಯ ದಿನವೇ ಪ್ರಾಣೇಶನ ಸಂಸಾರವೆಲ್ಲ ವೆಂಕೋಬಾ ಚಾರಿಯ ಮನೆಗೆ ಬಂದಿತು.

. . . .

ಗೋಧೂಬಾಯಿಗೆ ಮತ್ತೆ ಮಕ್ಕಳಾಗಲಿಲ್ಲ. ಆದರೆ ರಾಧೆ ಮತ್ತೊಂದು ಗಂಡು, ಮತ್ತೊಂದು ಹೆಣ್ಣನ್ನು ಹೆತ್ತಳು. ಸವತಿಯ ಮಕ್ಕಳೇ ತನ್ನ ಮಕ್ಕಳೆಂದು ಭಾವಿಸಿದಳು. "ಏನೂ ಅರಿಯದ ಕಂದಮ್ಮಗಳ ಮೇಲೆ ನಾವು ದ್ವೇಷ ಸಾಧಿಸುವುದು ಪಾಪ'' ಇದು ಅವಳ ಪಲ್ಲವಿ.